# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೨೭, ೨೦೧೪ (ಚೈತ್ರ ೬, ಶಕ ವರ್ಷ ೧೯೩೫)<br>Bangalore, Thursday, March 27, 2014 (Chaithra 6, Shaka Varsha 1935) | ಸಂಚಿಕೆ ೧೩<br>Issue 13 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2013-14ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/01/2013-14 ಡಿಆರ್‌ಡಿಎ (ಎಸ್‌ಎಲ್ ನಂ. 10) ದಿನಾಂಕ 29-06-2013.
2. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 26 ಎಸ್‌ಜೆವೈ (ಡಿಆರ್‌ಡಿಎ) 2013, ಬೆಂಗಳೂರು, ದಿನಾಂಕ 29-07-2013, 07-10-2013 ಮತ್ತು 20-01-2014.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್-17014/11/2013-14 ಡಿಆರ್‌ಡಿಎ (ಎಸ್‌ಎಲ್ ನಂ. 31) ದಿನಾಂಕ 05-09-2013.
4. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 55 ಎಸ್‌ಜೆವೈ (ಡಿಆರ್‌ಡಿಎ) 2013, ಬೆಂಗಳೂರು, ದಿನಾಂಕ 19-11-2013.
5. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರ ಪತ್ರ ಸಂಖ್ಯೆ : ಆರ್ 17014/11/2013 ಡಿಆರ್‌ಡಿಎ (ಎಸ್‌ಎಲ್ ನಂ. 65) ದಿನಾಂಕ 20-11-2013, (ಎಸ್‌ಎಲ್ ನಂ.83) ದಿನಾಂಕ 06-12-2013 ಮತ್ತು (ಎಸ್‌ಎಲ್ ನಂ. 97) ದಿನಾಂಕ 18-12-2013.
6. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರ ಪತ್ರ ಸಂಖ್ಯೆ : ಆರ್ 17014/11/2013 ಡಿಆರ್‌ಡಿಎ (ಎಸ್‌ಎಲ್ ನಂ. 109) ದಿನಾಂಕ 17-01-2014.

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25 ರ ಅನುಪಾತದಲ್ಲಿ ಭರಿಸುತ್ತವೆ. 2013-14ನೇ ಸಾಲಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರ ರಾಜ್ಯದ 26 ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಅನುದಾನವಾಗಿ (ಚಿಕ್ಕಬಳ್ಳಾಪುರ, ದಾವಣಗೆರೆ, ಕೊಪ್ಪಳ ಮತ್ತು ಯಾದಗಿರಿ 4 ಜಿಲ್ಲೆಗಳನ್ನು ಹೊರತುಪಡಿಸಿ) ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1), (3) ಮತ್ತು (2) ರಲ್ಲಿ ಒಂದನೇ ಕಂತಿನ ಅನುದಾನ ₹ 4,52,10,000 ಮತ್ತು ₹ 1,50,78,000/- ಗಳನ್ನು ಅನುಕ್ರಮವಾಗಿ ಬಿಡುಗಡೆ ಮಾಡಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಓದಲಾಗಿದೆ (5) ರನ್ವಯ 2013-14ನೇ ಸಾಲಿಗೆ ರಾಜ್ಯದ 20 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನ ₹ 1,61,53,000/- ಗಳನ್ನು ಬಿಡುಗಡೆ ಮಾಡಲಾಗಿದೆ. ಆದರೆ, ಈಗಾಗಲೇ ಕೇಂದ್ರ ಪಾಲಿನ ಅನುದಾನದ ನಿರೀಕ್ಷೆಯಲ್ಲಿ ರಾಜ್ಯದ 21 ಜಿಲ್ಲಾ ಪಂಚಾಯತಿಗಳಿಗೆ 2013-14 ನೇ ಸಾಲಿಗೆ ಮುಂಗಡವಾಗಿ ರಾಜ್ಯದ ಪಾಲಿನ ಅನುದಾನ ₹ 2,55,00,000/- ಗಳನ್ನು ಓದಲಾಗಿದೆ (4)ರ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು. ಈಗಾಗಲೇ ಬಳ್ಳಾರಿ, ಹಾಸನ ಮತ್ತು ರಾಮನಗರ ಜಿಲ್ಲಾ ಪಂಚಾಯತ್ ಹೊರತುಪಡಿಸಿ ಉಳಿದ 17 ಜಿಲ್ಲಾ ಪಂಚಾಯತ್‌ಗಳಿಗೆ ₹ 2,10,00,000/- ಗಳನ್ನು ಮುಂಗಡವಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲಾಗಿದೆ. ಕೇಂದ್ರ ಸರ್ಕಾರವು ಹಾಸನ ಮತ್ತು ರಾಮನಗರ ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಅನುದಾನ ಶೂನ್ಯ ಹಾಗೂ ಬಳ್ಳಾರಿ ಜಿಲ್ಲಾ ಪಂಚಾಯತ್‌ಗೆ ₹ 11,74,000/-

ಬಿಡುಗಡೆ ಮಾಡಿದ್ದು, ಅದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ ₹ 3,91,000/– ಗಳನ್ನು ಓದಲಾಗಿದೆ(2)ರ ಸರ್ಕಾರದ ಆದೇಶದ ದಿನಾಂಕ 20.01.2014 ರಂದು ಬಿಡುಗಡೆ ಮಾಡಲಾಗಿದೆ.

ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಓದಲಾಗಿದೆ (6) ರನ್ವಯ 2013–14ನೇ ಸಾಲಿಗೆ ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಎರಡನೇ ಕಂತಿನ ಅನುದಾನಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಬಾಗಲಕೋಟೆ, ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ.

ಬಾಗಲಕೋಟೆ ಜಿಲ್ಲೆಗೆ ಆರಂಭಶಿಲ್ಕು ಹೆಚ್ಚಿರುವ ಕಾರಣದಿಂದ ಕೇಂದ್ರ ಅನುದಾನವನ್ನು ಕಡಿತಗೊಳಿಸಿ ಬಿಡುಗಡೆ ಮಾಡಿದ ಪ್ರಯುಕ್ತ ಬಿಡುಗಡೆ ಶೂನ್ಯವಾಗಿದೆ. ಇದರಿಂದಾಗಿ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡುವ ಅವಶ್ಯಕತೆಯಿರುವುದಿಲ್ಲ.

ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗಳಿಗೆ ₹ 20,53,000/– ಗಳನ್ನು ಕೇಂದ್ರ ಸರ್ಕಾರ ತನ್ನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡಿದ್ದು, ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವಾಗಿ ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತ್‌ಗಳಿಗೆ ₹6,85,000/– ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ :

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 26 ಎಸ್‌ಜಿವೈ (ಡಿಆರ್‌ಡಿಎ) 2013, ಬೆಂಗಳೂರು, ದಿನಾಂಕ: 03–02–2014**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2013–14ನೇ ಸಾಲಿಗೆ ಎರಡನೇ ಕಂತಿನ ಅನುದಾನ ₹ 6,85,000/– ಗಳನ್ನು (₹ ಆರು ಲಕ್ಷದ ಎಂಬತ್ತೈದು ಸಾವಿರ ಮಾತ್ರ) ಬಾಗಲಕೋಟೆ, ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗಳಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

[₹ ಗಳಲ್ಲಿ]

| ಕ್ರಮ ಸಂಖ್ಯೆ | ಜಿಲ್ಲಾ ಪಂಚಾಯತಿಯ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | 2012–13ನೇ ಸಾಲಿನಲ್ಲಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 0 | 0 |
| 2 | ಗುಲ್ಬರ್ಗಾ | 417 | 3200ZZ0003 | 4,76,000 | 1,59,000 |
| 3 | ಉತ್ತರ ಕನ್ನಡ | 416 | 3000ZZ0080 | 15,77,000 | 5,26,000 |
| | **ಒಟ್ಟು ₹** | | | **20,53,000** | **6,85,000** |

**ಷರತ್ತುಗಳು :** ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196– ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6– ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ – (ಕೇಂದ್ರ ಪುರಸ್ಕೃತ ಯೋಜನೆ) 2013–2014 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1 ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/ 2011 ದಿನಾಂಕ 30–3–2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಬಾಗಲಕೋಟೆ, ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಾಗಲಕೋಟೆ, ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5 ನೇ ತಾರೀಖಿನೊಳಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಅಂತರ್ಜಾಲದಲ್ಲಿ ನಮೂದಿಸುವುದು.

ಬಾಗಲಕೋಟೆ, ಉತ್ತರ ಕನ್ನಡ ಮತ್ತು ಗುಲ್ಬರ್ಗಾ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ : ಗ್ರಾಅಪ 70 ಪಿಬಿಎಸ್ 2014 ದಿನಾಂಕ 31-01-2014 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರೋಹಿಣಿ ಸಿಂಧೂರಿ,**
ನಿರ್ದೇಶಕರು (ಇ-ಆಡಳಿತ) ಮತ್ತು ಸ್ವಉಕಾ
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR. 193**

## ತೋಟಗಾರಿಕೆ ಸಚಿವಾಲಯ

**ವಿಷಯ:** ತೋಟಗಾರಿಕೆ ಇಲಾಖಾ ವತಿಯಿಂದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕು ಚಿಕ್ಕನಹಳ್ಳಿ ಹಾಗೂ ದಾವಣಗೆರೆ ಜಿಲ್ಲೆಯ RMC ತೋಟಗಾರಿಕೆ ಕ್ಷೇತ್ರದಲ್ಲಿ ನಿರ್ಮಾಣಗೊಂಡಿರುವ ಪುಷ್ಪ ಮಾರಾಟ ಚಟುವಟಿಕೆಗಳನ್ನು ಪ್ರಾರಂಭಿಸಲು 2 ಕೇಂದ್ರಗಳ ಕಟ್ಟಡಗಳನ್ನು ಕೃಷಿ ಮಾರುಕಟ್ಟೆ ಇಲಾಖೆಯ ಸುಪರ್ದಿಗೆ ನೀಡುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 06-09-2013 ರಂದು ಪ್ರಧಾನ ಕಾರ್ಯದರ್ಶಿಗಳು ತೋಟಗಾರಿಕೆ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಜರುಗಿದ ಸಭಾ ನಡವಳಿ.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ತೋಇ/ಸತೋನಿ/ಪುವಿ/ಸತೋಅ/6/2013-14/25, ದಿನಾಂಕ 12-12-2013.

**ಪ್ರಸ್ತಾವನೆ:**

ಮೇಲೆ ಕ್ರ. ಸಂ. 1 ರಲ್ಲಿ ಓದಲಾದ ದಿನಾಂಕ 06-09-2013ರ ಸಭಾ ನಡವಳಿಯಲ್ಲಿ 2 ಪುಷ್ಪ ಹರಾಜು ಕೇಂದ್ರಗಳಲ್ಲಿ ಪುಷ್ಪ ಹರಾಜು ಚಟುವಟಿಕೆಗಳನ್ನು ಕೃಷಿ ಮಾರುಕಟ್ಟೆ ಇಲಾಖಾ ವತಿಯಿಂದ ಪ್ರಾರಂಭಿಸಲು ಅನುಕೂಲವಾಗುವಂತೆ ಸದರಿ ಇಲಾಖೆಯ ಸುಪರ್ದಿಗೆ ನೀಡಲು ಈ ಕೆಳಕಂಡ ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು.

1) ಚಿಕ್ಕನಹಳ್ಳಿ ಹಾಗೂ ದಾವಣಗೆರೆ ಕ್ಷೇತ್ರಗಳನ್ನು ಕೃಷಿ ಮಾರುಕಟ್ಟೆ ಇಲಾಖೆಗೆ ಪ್ರಾರಂಭದಲ್ಲಿ 2 ವರ್ಷಗಳ ಕಾಲ ವಹಿಸಿಕೊಡಲು ತೋಟಗಾರಿಕೆ ಇಲಾಖೆಯು ಕೂಡಲೇ ಕ್ರಮವಹಿಸುವುದು.
2) ಮೂಲಭೂತ ಸೌಕರ್ಯದ ಒಡೆತನವು ತೋಟಗಾರಿಕೆ ಇಲಾಖೆಯಲ್ಲಿಯೇ ಮುಂದುವರೆಸಿಕೊಂಡು ಹೋಗುವುದು.
3) ಕೃಷಿ ಮಾರುಕಟ್ಟೆ ಇಲಾಖೆಯು ಪ್ರಸ್ತುತ ನಿರ್ಮಿಸಿರುವ ಮೂಲಭೂತ ಸೌಕರ್ಯದ ಬಳಸುವಿಕೆಗೆ ತೋಟಗಾರಿಕೆ ಇಲಾಖೆಗೆ ಮಾಹೆಯಾನ ಪ್ರತಿ ಕೇಂದ್ರಕ್ಕೆ ರೂ. 1,000/- ರಂತೆ ಸೇವಾ ಶುಲ್ಕವನ್ನು ಪಾವತಿಸುವುದು.
4) ಈ ಅವಧಿಯನ್ನು ಮುಂದುವರೆಸುವ ಬಗ್ಗೆ ಪುಷ್ಪ ಹರಾಜು ಮಾಡುವ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸಿ, ಮುಂದುವರೆಸುವ ಬಗ್ಗೆ ಮುಂದೆ ತೀರ್ಮಾನ ತೆಗೆದುಕೊಳ್ಳಲಾಗುವುದು.

ಕ್ರಮ ಸಂಖ್ಯೆ 2ರಲ್ಲಿ ದಿನಾಂಕ 06-09-2013 ರ ಸಭಾ ನಡವಳಿಯಲ್ಲಿ ತೆಗೆದುಕೊಂಡ ನಿರ್ಣಯಗಳಂತೆ, 2 ಪುಷ್ಪ ಹರಾಜು ಕೇಂದ್ರಗಳಲ್ಲಿ ಪುಷ್ಪ ಹರಾಜು ಚಟುವಟಿಕೆಗಳನ್ನು ಕೃಷಿ ಮಾರುಕಟ್ಟೆ ಇಲಾಖಾ ವತಿಯಿಂದ ಪ್ರಾರಂಭಿಸಲು ಅನುಕೂಲವಾಗುವಂತೆ ಪ್ರಸ್ತುತ ತೋಟಗಾರಿಕೆ ಇಲಾಖೆ ಅಧೀನದಲ್ಲಿರುವುದನ್ನು ಕೃಷಿ ಮಾರುಕಟ್ಟೆಗೆ ಮೇಲ್ಕಂಡ ಕ್ರ.ಸಂ. 1 ರಲ್ಲಿ ಓದಲಾದ ಷರತ್ತುಗಳ ಅನ್ವಯ ಹಸ್ತಾಂತರಿಸಲು ಸರ್ಕಾರದಿಂದ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 219 ತೋಸವಿ 2013, ಬೆಂಗಳೂರು, ದಿನಾಂಕ: 30-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ತೋಟಗಾರಿಕೆ ಇಲಾಖಾ ವತಿಯಿಂದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕು ಚಿಕ್ಕನಹಳ್ಳಿ ಹಾಗೂ ದಾವಣಗೆರೆ ಜಿಲ್ಲೆಯ RMC ತೋಟಗಾರಿಕೆ ಕ್ಷೇತ್ರದಲ್ಲಿ ನಿರ್ಮಾಣಗೊಂಡಿರುವ ಪುಷ್ಪ ಮಾರಾಟ ಚಟುವಟಿಕೆಗಳನ್ನು ಪ್ರಾರಂಭಿಸಲು 2 ಕೇಂದ್ರಗಳ ಕಟ್ಟಡಗಳನ್ನು ಕೃಷಿ ಮಾರುಕಟ್ಟೆ ಇಲಾಖೆಯ ಸುಪರ್ದಿಗೆ ನೀಡಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಆದೇಶಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು**

1) ಚಿಕ್ಕನಹಳ್ಳಿ ಹಾಗೂ ದಾವಣಗೆರೆ ಕ್ಷೇತ್ರಗಳನ್ನು ಕೃಷಿ ಮಾರುಕಟ್ಟೆ ಇಲಾಖೆಗೆ ಪ್ರಾರಂಭದಲ್ಲಿ 2 ವರ್ಷಗಳ ಕಾಲ ವಹಿಸಿಕೊಡಲು ತೋಟಗಾರಿಕೆ ಇಲಾಖೆಯು ಕೂಡಲೇ ಕ್ರಮವಹಿಸುವುದು.

2) ಮೂಲಭೂತ ಸೌಕರ್ಯದ ಒಡೆತನವು ತೋಟಗಾರಿಕೆ ಇಲಾಖೆಯಲ್ಲಿಯೇ ಮುಂದುವರೆಸಿಕೊಂಡು ಹೋಗುವುದು.

3) ಕೃಷಿ ಮಾರುಕಟ್ಟೆ ಇಲಾಖೆಯು ಪ್ರಸ್ತುತ ನಿರ್ಮಿಸಿರುವ ಮೂಲಭೂತ ಸೌಕರ್ಯದ ಬಳಸುವಿಕೆಗೆ ತೋಟಗಾರಿಕೆ ಇಲಾಖೆಗೆ ಮಾಹೆಯಾನ ಪ್ರತಿ ಕೇಂದ್ರಕ್ಕೆ ರೂ. 1,000/- ರಂತೆ ಸೇವಾ ಶುಲ್ಕವನ್ನು ಪಾವತಿಸುವುದು.

4) ಈ ಅವಧಿಯನ್ನು ಮುಂದುವರೆಸುವ ಬಗ್ಗೆ ಪುಷ್ಪ ಹರಾಜು ಮಾಡುವ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸಿ, ಮುಂದುವರೆಸುವ ಬಗ್ಗೆ ಮುಂದೆ ತೀರ್ಮಾನ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ರಾಮಲಿಂಗಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**PR. 198**

## ತೋಟಗಾರಿಕೆ ಸಚಿವಾಲಯ

**ವಿಷಯ:** ಹಾಸನ ಜಿಲ್ಲಾ ಹಾಪ್‌ಕಾಮ್ಸ್‌ನಲ್ಲಿ ಸಂಗ್ರಹಣಾ ಕೇಂದ್ರ ನಿರ್ಮಿಸಲು ಸ್ಥಳಾವಕಾಶ ನೀಡುವ ಬಗ್ಗೆ.

**ಓದಲಾಗಿದೆ:** 1. ಪತ್ರ ಸಂಖ್ಯೆ : ಹಾ.ಜಿ.ಹಾ/2013-14/96, ದಿನಾಂಕ 16-11-2013.

2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ : ED/KSHDA/ಸತೋಅ- 2/11/2009-10, ದಿನಾಂಕ 16-12-2013.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ : ತೋಇ 62 ತೋಸವಿ 2013 ದಿನಾಂಕ 28-03-2013 ರಲ್ಲಿ ಹಾಪ್‌ಕಾಮ್ಸ್‌ರವರ ಕಾರ್ಯಚಟುವಟಿಕೆಗಳನ್ನು ನಡೆಸಲು ಮಂಜೂರಾಗಿದ್ದ ಹಾಸನ ಜಿಲ್ಲೆಯ ಸಿಲ್ವರ್‌ಜೂಬ್ಲಿ ಆರ್ಚರ್ಡ್ ತೋಟಗಾರಿಕೆ ಕ್ಷೇತ್ರದಲ್ಲಿ 20x10 ಚದರ ಅಡಿ ಹಾಗೂ ಶೀಥಲ ಗೃಹ ನರ್ಸರಿಯಲ್ಲಿ 10 ಗುಂಟೆ ಜಾಗವು ಹಾಪ್‌ಕಾಮ್ಸ್ ಕಾರ್ಯಚಟುವಟಿಕೆಗಳಿಗೆ ಸೂಕ್ತವಾಗಿಲ್ಲದಿರುವುದರಿಂದ, ಸದರಿ ಜಾಗದ ಬದಲಿಗೆ ಹಾಸನ ನಗರದ ಬಿ.ಎಂ. ರಸ್ತೆಯ ಪಕ್ಕದ ಮಹಮದ್ ಸ್ವಾಮಿ ಕೊಳದಲ್ಲಿ ಇರುವ 3200 ಚದರ ಅಡಿ ವಿಸ್ತೀರ್ಣದ ಜಾಗವನ್ನು ಹಾಸನ ಜಿಲ್ಲಾ ಹಾಪ್‌ಕಾಮ್ಸ್ ಆಡಳಿತ ಕಛೇರಿ, ಹವಾನಿಯಂತ್ರಿತ ಹಣ್ಣು ಮತ್ತು ತರಕಾರಿ ಮಳಿಗೆ, ದಾಸ್ತಾನು/ಉಗ್ರಾಣ ಕೊಠಡಿ ನಿರ್ಮಿಸಲು ಸ್ಥಳಾವಕಾಶ ನೀಡುವಂತೆ ವ್ಯವಸ್ಥಾಪಕ ನಿರ್ದೇಶಕರು, ಹಾಸನ ಜಿಲ್ಲಾ ಹಾಪ್‌ಕಾಮ್ಸ್‌ರವರು ತೋಟಗಾರಿಕೆ ನಿರ್ದೇಶಕರನ್ನು ಕೋರಿರುತ್ತಾರೆ.

ವ್ಯವಸ್ಥಾಪಕ ನಿರ್ದೇಶಕರು, ಹಾಸನ ಜಿಲ್ಲಾ ಹಾಪ್‌ಕಾಮ್ಸ್‌ರವರ ಕೋರಿಕೆಯ ಬಗ್ಗೆ ತೋಟಗಾರಿಕೆ ನಿರ್ದೇಶಕರ ಅಭಿಪ್ರಾಯ ಕೋರಲಾಗಿ, ಮೇಲೆ ಕ್ರ.ಸಂ. 2 ರಲ್ಲಿ ಓದಲಾದ ಪತ್ರದಲ್ಲಿ, ಸರ್ಕಾರದ ಆದೇಶ ಸಂಖ್ಯೆ : ತೋಇ 62 ತೋಸವಿ 2013, ದಿನಾಂಕ 28-03-2013 ರಲ್ಲಿ ಹಾಪ್‌ಕಾಮ್ಸ್‌ರವರ ಕಾರ್ಯಚಟುವಟಿಕೆಗಳನ್ನು ನಡೆಸಲು ಮಂಜೂರಾಗಿದ್ದ ಹಾಸನ ಜಿಲ್ಲೆಯ ಸಿಲ್ವರ್‌ಜೂಬ್ಲಿ ಆರ್ಚರ್ಡ್ ತೋಟಗಾರಿಕೆ ಕ್ಷೇತ್ರದಲ್ಲಿ 20x10 ಚದರ ಅಡಿ ಹಾಗೂ ಶೀಥಲ ಗೃಹ ನರ್ಸರಿಯಲ್ಲಿ 10 ಗುಂಟೆ ಜಾಗದ ಬದಲಿಗೆ ಹಾಸನ ನಗರದ ಬಿ.ಎಂ. ರಸ್ತೆಯ ಪಕ್ಕದ ಮಹಮದ್ ಸ್ವಾಮಿ ಕೊಳದಲ್ಲಿ ಇರುವ 3200 ಚದರ ಅಡಿ ವಿಸ್ತೀರ್ಣದ ಜಾಗವನ್ನು ಹಾಸನ ಜಿಲ್ಲಾ ಹಾಪ್‌ಕಾಮ್ಸ್ ಆಡಳಿತ ಕಛೇರಿ, ಹವಾನಿಯಂತ್ರಿತ ಹಣ್ಣು ಮತ್ತು ತರಕಾರಿ ಮಳಿಗೆ, ದಾಸ್ತಾನು/ಉಗ್ರಾಣ ಕೊಠಡಿ ನಿರ್ಮಿಸಿಕೊಳ್ಳಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಹಾಸನ ಜಿಲ್ಲೆಯ ಹಾಪ್‌ಕಾಮ್ಸ್‌ಗೆ ನೀಡಲು ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ತೋಟಗಾರಿಕೆ ನಿರ್ದೇಶಕರು ಕೋರಿರುತ್ತಾರೆ.

**ಷರತ್ತುಗಳು :**

1) ಈ ಪ್ರದೇಶದ ಒಡೆತನವು ತೋಟಗಾರಿಕೆ ಇಲಾಖೆಯ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಅಧೀನದಲ್ಲಿಯೇ ಮುಂದುವರೆಯುತ್ತದೆ.

2) ಈ ಪ್ರದೇಶವನ್ನು ಹಾಪ್‌ಕಾಮ್ಸ್‌ನ ನಿಗದಿತ ಕಾರ್ಯಚಟುವಟಿಕೆಗಳಿಗೆ ಹೊರತುಪಡಿಸಿ, ಬೇರೆ ಯಾವುದೇ ಚಟುವಟಿಕೆಗಳಿಗೆ ಉಪಯೋಗಿಸುತ್ತಿರುವುದು ಕಂಡು ಬಂದಲ್ಲಿ ಈ ಪ್ರದೇಶವನ್ನು ವಾಪಸ್ಸು ಪಡೆಯಲಾಗುವುದು.

3) ಈ ಪ್ರದೇಶದಲ್ಲಿರುವ ಸಸ್ಯ ಸಂಪತ್ತು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಆಸ್ತಿಯಾಗಿದ್ದು, ಇವುಗಳನ್ನು ಯಾವುದೇ ಕಾರಣಕ್ಕೂ ನಾಶ ಮಾಡಬಾರದಾಗಿಯೂ ಹಾಗೂ ಸಸ್ಯ ಸಂಪತ್ತಿನಿಂದ ಬರುವ ಆದಾಯವು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯದ್ದಾಗಿರುತ್ತದೆ.

4) ಈ ಪ್ರದೇಶವನ್ನು ಹಸ್ತಾಂತರಿಸಿಕೊಂಡ ದಿನದಿಂದ ಲೋಕೋಪಯೋಗಿ ಇಲಾಖೆಯ ನಿಯಮಾವಳಿಯಂತೆ ಆ ಪ್ರದೇಶಕ್ಕೆ ಕಾಲಕಾಲಕ್ಕೆ ಬಾಡಿಗೆಯನ್ನು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಗೆ ಪಾವತಿಸುವುದು.

5) ನಿಗದಿತ ಕ್ಷೇತ್ರದಲ್ಲಿ ಗುರುತಿಸಲಾದ ಪ್ರದೇಶದ ನಕ್ಷೆಯನ್ನು ತಯಾರಿಸಿ, ತೋಟಗಾರಿಕೆ ನಿರ್ದೇಶಕರಿಂದ ಅನುಮೋದನೆ ಪಡೆದ ನಂತರವೇ ಸದರಿ ಸ್ಥಳವನ್ನು ಹಾಪ್‌ಕಾಮ್ಸ್ ಸಂಸ್ಥೆಗೆ ಹಸ್ತಾಂತರಿಸುವುದು.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 15 ತೋಸವಿ 2013, ಬೆಂಗಳೂರು, ದಿನಾಂಕ: 28-12-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ : ತೋಇ 62 ತೋಸವಿ 2013, ದಿನಾಂಕ 28-03-2013ರ ಆದೇಶವನ್ನು ಹಿಂಪಡೆದು, ಹಾಸನ ನಗರದ ಬಿ.ಎಂ. ರಸ್ತೆಯ ಪಕ್ಕದ ಮಹಮದ್ ಸ್ವಾಮಿ ಕೊಳದಲ್ಲಿ ಇರುವ 3200 ಚದರ ಅಡಿ ವಿಸ್ತೀರ್ಣದ ಜಾಗವನ್ನು ಹವಾನಿಯಂತ್ರಿತ ಹಣ್ಣು ಮತ್ತು ತರಕಾರಿ ಮಳಿಗೆ, ದಾಸ್ತಾನು/ಉಗ್ರಾಣ ಕೊಠಡಿ ನಿರ್ಮಿಸಿಕೊಳ್ಳಲು ಹಾಸನ ಜಿಲ್ಲಾ ಹಾಪ್‌ಕಾಮ್ಸ್ ಆಡಳಿತ ಕಛೇರಿ, ಇವರಿಗೆ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಹಸ್ತಾಂತರಿಸಲು ಆದೇಶಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು**

1) ಈ ಪ್ರದೇಶದ ಒಡೆತನವು ತೋಟಗಾರಿಕೆ ಇಲಾಖೆಯ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಅಧೀನದಲ್ಲಿಯೇ ಮುಂದುವರೆಯುತ್ತದೆ.

2) ಈ ಪ್ರದೇಶವನ್ನು ಹಾಪ್‌ಕಾಮ್ಸ್‌ನ ನಿಗದಿತ ಕಾರ್ಯಚಟುವಟಿಕೆಗಳಿಗೆ ಹೊರತುಪಡಿಸಿ, ಬೇರೆ ಯಾವುದೇ ಚಟುವಟಿಕೆಗಳಿಗೆ ಉಪಯೋಗಿಸುತ್ತಿರುವುದು ಕಂಡುಬಂದಲ್ಲಿ ಈ ಪ್ರದೇಶವನ್ನು ವಾಪಸ್ಸು ಪಡೆಯಲಾಗುವುದು.

3) ಈ ಪ್ರದೇಶದಲ್ಲಿರುವ ಸಸ್ಯ ಸಂಪತ್ತು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯ ಆಸ್ತಿಯಾಗಿದ್ದು, ಇವುಗಳನ್ನು ಯಾವುದೇ ಕಾರಣಕ್ಕೂ ನಾಶ ಮಾಡಬಾರದಾಗಿಯೂ ಹಾಗೂ ಸಸ್ಯ ಸಂಪತ್ತಿನಿಂದ ಬರುವ ಆದಾಯವು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಯದ್ದಾಗಿರುತ್ತದೆ.

4) ಈ ಪ್ರದೇಶವನ್ನು ಹಸ್ತಾಂತರಿಸಿಕೊಂಡ ದಿನದಿಂದ ಮಾಹೆಯಾನ ರೂ. 1,000/- ರಂತೆ ಬಾಡಿಗೆಯನ್ನು ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿಗೆ ಪಾವತಿಸುವುದು.

5) ನಿಗದಿತ ಕ್ಷೇತ್ರದಲ್ಲಿ ಗುರುತಿಸಲಾದ ಪ್ರದೇಶದ ನಕ್ಷೆಯನ್ನು ತಯಾರಿಸಿ, ತೋಟಗಾರಿಕೆ ನಿರ್ದೇಶಕರಿಂದ ಅನುಮೋದನೆ ಪಡೆದ ನಂತರವೇ ಸದರಿ ಸ್ಥಳವನ್ನು ಹಾಪ್‌ಕಾಮ್ಸ್ ಸಂಸ್ಥೆಗೆ ಹಸ್ತಾಂತರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

**PR. 199**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 2013-14ನೇ ಸಾಲಿನಲ್ಲಿ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ರೈತರಿಂದ ಸಾಮಾನ್ಯ ಭತ್ತದೊಂದಿಗೆ ಗ್ರೇಡ್-ಎ ಭತ್ತವನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಆನಾಸ 29 ಆರ್‌ಪಿಆರ್ 2013, ದಿನಾಂಕ : 19-11-2013.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಸಾಮಾನ್ಯ ಭತ್ತವನ್ನು ಮಾತ್ರ ಪ್ರತಿ ಕ್ವಿಂಟಾಲ್‌ಗೆ ರೂ. 1600/-ರ ದರದಲ್ಲಿ (ಕೇಂದ್ರ ಸರ್ಕಾರದ ದರ ಪ್ರತಿ ಕ್ವಿಂಟಾಲ್‌ಗೆ ರೂ. 1310/- ಮತ್ತು ರಾಜ್ಯ ಸರ್ಕಾರದ ಪ್ರೋತ್ಸಾಹ ಧನ ರೂ. 290/-ನ್ನು ಸೇರಿಸಿ) ಖರೀದಿಸುವಂತೆ ಆದೇಶಿಸಲಾಗಿತ್ತು.

ಈ ಮಧ್ಯೆ ಕೆಲವು ಜಿಲ್ಲೆಗಳಿಂದ ರೈತರು ಗ್ರೇಡ್-ಎ ಭತ್ತವನ್ನು ಖರೀದಿಸಲು ಒತ್ತಾಯ ಮಾಡುತ್ತಿರುವುದಾಗಿ ಸಂಬಂಧಿಸಿದ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿಯನ್ನು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ರೈತರ ಹಿತದೃಷ್ಟಿಯಿಂದ ಗ್ರೇಡ್-ಎ ಭತ್ತವನ್ನು ಸಹಾ ಪ್ರತಿ ಕ್ವಿಂಟಾಲ್‌ಗೆ ರೂ. 1600/-ರ ದರದಲ್ಲಿ ಖರೀದಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 29 ಆರ್‌ಪಿಆರ್ 2013 (ಭಾ), ಬೆಂಗಳೂರು, ದಿನಾಂಕ : 30-12-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2013-14ನೇ ಸಾಲಿನಲ್ಲಿ ರೈತರಿಂದ ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಪ್ರತಿ ಕ್ವಿಂಟಾಲ್‌ಗೆ ರೂ. 1600/-ರ ದರದಲ್ಲಿ ಖರೀದಿಸಲಾಗುತ್ತಿರುವ ಸಾಮಾನ್ಯ ಭತ್ತದೊಂದಿಗೆ ಅದೇ ದರದಲ್ಲಿ ಅಂದರೆ ಪ್ರತಿ ಕ್ವಿಂಟಾಲ್‌ಗೆ ರೂ. 1600/-ರ ದರದಲ್ಲಿ ಗ್ರೇಡ್-ಎ ಭತ್ತವನ್ನು ಸಹಾ ತಕ್ಷಣದಿಂದ ಜಾರಿಗೆ ಬರುವಂತೆ ರೈತರಿಂದ ಖರೀದಿಸಲು ಸರ್ಕಾರವು ಆದೇಶಿಸಿದೆ. ಇನ್ನುಳಿದಂತೆ ದಿನಾಂಕ : 19-11-2013ರ ಆದೇಶಕ್ಕೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 101**
**SC-200**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಕಾನೂನು ಕೋಶ ಮತ್ತು ಶ್ರೀ ಎಂ. ದೇವರಾಜು ಶಾಖಾಧಿಕಾರಿ ಸಾರಿಗೆ ಇಲಾಖೆ ಇವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 29-04-2008
2. ನೋಟೀಸ್ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 06-11-2008
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 17-03-2009
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 01-12-2009
5. ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ, ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 28-08-2010.
6. ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರ ಪ್ರತಿರಕ್ಷಣಾ ಹೇಳಿಕೆ ದಿನಾಂಕ : 13-01-2009.
7. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 16-09-2010
8. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ದಿನಾಂಕ : 29-07-2011
9. ವಿಚಾರಣಾಧಿಕಾರಿಯವರ ಪತ್ರ ದಿನಾಂಕ : 20-07-2013.

**ಪ್ರಸ್ತಾವನೆ :**

ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರುಗಳು ಈ ಹಿಂದೆ ಆರ್ಥಿಕ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗೆ ಸಂಬಂಧಪಟ್ಟ ಪ್ರಕರಣದಲ್ಲಿ ಆರ್ಥಿಕ ಇಲಾಖೆಯಲ್ಲಿ ತಮ್ಮ ಮೇಲಧಿಕಾರಿಗಳು ತೆಗೆದುಕೊಂಡ ತೀರ್ಮಾನಕ್ಕೆ ವ್ಯತಿರಿಕ್ತವಾಗಿ ಹಾಗೂ ಆಡಳಿತ ಇಲಾಖೆಯ ಪ್ರಸ್ತಾವನೆಗೆ ಅನುಕೂಲಕರವಾಗುವ ರೀತಿಯಲ್ಲಿ ಸರ್ಕಾರಿ ವೈಮಾನಿಕ ತರಬೇತಿ ಸಂಸ್ಥೆಯ ನಿರ್ವಹಣೆಯನ್ನು ಸಹಗುತ್ತಿಗೆಗೆ ನೀಡುವ ವಿಚಾರದಲ್ಲಿ ಅಭಿಪ್ರಾಯ ನೀಡಿದ್ದ ಮತ್ತು ಇದೇ ಪ್ರಕರಣಕ್ಕೆ ಸಂಬಂಧಿಸಿದ ಆರ್ಥಿಕ ಇಲಾಖೆಯ ಕಡತ ಸಂಖ್ಯೆ : ಎಫ್‌ಡಿ 244 ವೆಚ್ಚ-5 2008ನ್ನು ನಾಪತ್ತೆ ಮಾಡಿದ್ದ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ 01 ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರುಗಳ ವಿರುದ್ಧದ ಶಿಸ್ತುಕ್ರಮವನ್ನು ಬಾಕಿ ಇರಿಸಿ ಸದರಿ ಅಧಿಕಾರಿಗಳನ್ನು ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ನೋಟೀಸಿನೊಂದಿಗೆ, ಸದರಿ ಅಧಿಕಾರಿಗಳಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಇ) ನಿಯಮಾವಳಿಗಳು 1957ರ ನಿಯಮ 11 ಮತ್ತು 11ಎ ರಡಿ ಶಿಸ್ತು ಕ್ರಮ ಕೈಗೊಳ್ಳುವ ಉದ್ದೇಶದಿಂದ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು.

ಮೇಲೆ (3) ಮತ್ತು (4)ರಲ್ಲಿ, ಓದಲಾದ ಸರ್ಕಾರದ ಆದೇಶಗಳಲ್ಲಿ ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರುಗಳ ವಿರುದ್ಧದ ಶಿಸ್ತುಕ್ರಮವನ್ನು ಬಾಕಿ ಇಟ್ಟು ಸದರಿ ಅಧಿಕಾರಿಗಳ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಮರುಸ್ಥಾಪಿಸಿ ಆದೇಶಿಸಲಾಗಿತ್ತು.

ಮೇಲೆ (5) ಮತ್ತು (6)ರಲ್ಲಿ ಓದಲಾದ ಮನವಿಗಳಲ್ಲಿ ಆರೋಪಿತ ಅಧಿಕಾರಿಗಳು ತಮ್ಮ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ ತಮ್ಮಗಳ ಪ್ರತಿ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿ ತಮ್ಮನ್ನು ದೋಷಮುಕ್ತಗೊಳಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ. ಆರೋಪಿತ ಅಧಿಕಾರಿಗಳು ಸಲ್ಲಿಸಿದ್ದ ಪ್ರತಿರಕ್ಷಣಾ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಅವರುಗಳ ಪ್ರತಿರಕ್ಷಣಾ ಹೇಳಿಕೆಯಲ್ಲಿ ಪರಿಗಣಿಸಬಹುದಾದ ಅಂಶಗಳು ಕಂಡುಬರುತ್ತಿಲ್ಲವಾದ ಹಿನ್ನೆಲೆಯಲ್ಲಿ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಮೇಲೆ 7ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಕರಣದ ವಿಚಾರಣೆ ನಡೆಸಲು ಶ್ರೀ ಸುಬ್ಬಾರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿತ್ತು. ಆದರೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಲು ಹಾಜರಾಗದೇ ಇದ್ದುದರಿಂದ ಕ.ನಾ.ಸೇ (ಸಿಸಿಎ) 1957ರ 11(2) ಪ್ರಕರಣದ ವಿಚಾರಣೆಯನ್ನು ನಡೆಸಲು ಮೇಲೆ 08ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಶ್ರೀ ಸುಬ್ಬಾರಾವ್ ಇವರ ಬದಲು ಶ್ರೀ ಎಸ್.ವೈ. ಕುಂಬಾರ್ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು.

ಅದರಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ 09ರಲ್ಲಿ ಓದಲಾದ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿದ್ದು, ವಿಚಾರಣಾ ವರದಿಯಲ್ಲಿ ಶ್ರೀ ಟಿ. ಅಶೋಕ್ ಅಧೀನ ಕಾರ್ಯದರ್ಶಿ ಇವರ ವಿರುದ್ಧ ಹೊರಿಸಲಾಗಿದ್ದ ಒಂದು ಆರೋಪ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಇವರ ವಿರುದ್ಧ ಹೊರಿಸಲಾಗಿದ್ದ 02 ಆರೋಪಗಳು ಸಾಬೀತಾಗಿರುವುದಿಲ್ಲ ಎಂದು ನಿರ್ಣಯಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಇದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀ ಎಂ. ದೇವರಾಜು ಇವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 38 ಎಸ್‌ಎಎಸ್ 2009, ದಿನಾಂಕ : 05-04-2010 ರಲ್ಲಿ ಸಿ.ಐ.ಡಿಗೆ ಅನುಮತಿ ನೀಡಲಾಗಿದ್ದು ಪ್ರಕರಣದ ವಿಚಾರಣೆಯು ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ. ಇಲಾಖಾ ಶಿಸ್ತು ವ್ಯವಹರಣೆಗಳು ಮತ್ತು ನ್ಯಾಯಾಂಗ ವ್ಯವಹರಣೆಗಳು ಬೇರೆ ಬೇರೆಯಾಗಿರುವುದರಿಂದ ಮತ್ತು ಸರ್ಕಾರಿ ನೌಕರನು ಕ್ರಿಮಿನಲ್ ಆರೋಪದ ಮೇಲೆ ತಪ್ಪಿತಸ್ಥನೆಂದು ತೀರ್ಪು ನೀಡಿದ ಸಂದರ್ಭದಲ್ಲಿ ಅಂತಹ ನಿರ್ಣಯವು ಸಂವಿಧಾನದ 311(2) ಮತ್ತು 309ನೇ ಅನುಚ್ಛೇದದಡಿ ನಡೆಸುವ ಇಲಾಖಾ ವಿಚಾರಣೆಯಲ್ಲಿನ ತೀರ್ಮಾನಕ್ಕೆ ಸಮನಾದುದು ಎಂದು ತೀರ್ಮಾನಿಸಿ ಕ.ನಾ.ಸೇ (ಸಿಸಿಎ) 1957ರ ನಿಯಮ 14(1)ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ನ್ಯಾಯಾಲಯದ ತೀರ್ಮಾನ ಪ್ರಕರಣದ ವಿಷಯಗಳು ಸಂದರ್ಭ ಸನ್ನಿವೇಶಗಳು ಮತ್ತು ಆತನು ತಪ್ಪಿತಸ್ಥನೆಂಬ ತೀರ್ಪಿಗೆ ಕಾರಣವಾದ ನಡತೆಯ ಆಧಾರದ ಮೇಲೆ ಕ.ನಾ.ಸೇ. (ಸಿಸಿಎ) 1957ರ ನಿಯಮ 8ರಡಿ ದಂಡನೆಯನ್ನು ವಿಧಿಸಲು ಅವಕಾಶವಿರುತ್ತದೆ. ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ವಿಚಾರಣಾಧಿಕಾರಿಯವರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಅಂಗೀಕರಿಸಿ ಜಂಟಿ ಇಲಾಖಾ ವಿಚಾರಣೆಯ ಅಂತಿಮ ಆದೇಶವನ್ನು ಹೊರಡಿಸಲು ತೀರ್ಮಾನಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 06 ಸೇಇವಿ 2008, ಬೆಂಗಳೂರು ದಿನಾಂಕ : 23–12–2013.**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ಶ್ರೀ ಟಿ. ಅಶೋಕ್ ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಕಾನೂನು ಕೋಶ ಮತ್ತು ಶ್ರೀ ಎಂ. ದೇವರಾಜು, ಶಾಖಾಧಿಕಾರಿ ಸಾರಿಗೆ ಇಲಾಖೆ ಇವರುಗಳು ಈ ಹಿಂದೆ ಆರ್ಥಿಕ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದ್ದಾರೆನ್ನಲಾಗಿದ್ದ ಆರೋಪಗಳ ಬಗ್ಗೆ ಹೂಡಲಾದ ಇಲಾಖಾ ವಿಚಾರಣೆಯಲ್ಲಿ ಆರೋಪಗಳು ಸಾಬೀತಾಗದೇ ಇರುವುದರಿಂದ ಸದರಿ ಆರೋಪಗಳಿಂದ ಇವರುಗಳನ್ನು ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಜಂಟಿ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ, ಅಧಿಕಾರಿಗಳು ಯಾವ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 105

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ನೂತನ ಕರ್ನಾಟಕ ಏರೋಸ್ಪೇಸ್ ನೀತಿ 2013–23 ರಡಿ ಏರೋಸ್ಪೇಸ್ ಪಾರ್ಕ್‌ನ್ನು ಕಾರ್ಯಶೀಲಗೊಳಿಸಲು ಹೈಟೆಕ್ ಟೂಲ್‌ರೂಂ ಟೆಸ್ಟಿಂಗ್ ಅಂಡ್ ಕ್ಯಾಲಿಬ್ರೇಷನ್ ಸೆಂಟರ್ ಸ್ಥಾಪಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಐ 17 ಎಸ್‌ಪಿಐ 2012 (ಪಿ5), ದಿನಾಂಕ : 18–09–2013.
2. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ : ಕೈವಾಇ/ಕೈಅ/ಇ3/ಏರೋಸ್ಪೇಸ್ ನೀತಿ/ಪಾರ್ಕ್/2013–14, ದಿನಾಂಕ : 25–09–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಏರೋಸ್ಪೇಸ್ ನೀತಿ 2013–23ರಡಿ ಏರೋಸ್ಪೇಸ್ ಪಾರ್ಕ್‌ನ್ನು ಕಾರ್ಯಶೀಲಗೊಳಿಸಲು ವಿವಿಧ ಚಟುವಟಿಕೆಗಳಿಗೆ ಆರ್ಥಿಕ ಸಹಾಯ ನೀಡುವ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ತಾತ್ವಿಕ ಅನುಮೋದನೆಯನ್ನು ನೀಡಿದೆ ಹಾಗೂ 2013–14ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4852–80–004–0–01–211 (ಯೋಜನೆ) ಅಡಿ ಒಟ್ಟು ರೂ. 59.66 ಕೋಟಿ ಅನುದಾನ ಒದಗಿಸಿದ್ದು, ಇದರಲ್ಲಿ ರೂ. 10.00 ಕೋಟಿ ಅನುದಾನವನ್ನು ಏರೋಸ್ಪೇಸ್ ಪಾರ್ಕ್‌ನ್ನು ಕಾರ್ಯಶೀಲಗೊಳಿಸಲು ವಿವಿಧ ಚಟುವಟಿಕೆಗಳಾದ ಸಾಮಾನ್ಯ ಸೌಕರ್ಯ ಕೇಂದ್ರದ ಸ್ಥಾಪನೆ, ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರ, ಟೆಸ್ಟಿಂಗ್ ಕೇಂದ್ರಗಳು ಟೆಕ್ನಾಲಜಿ ಇನೋವೇಷನ್ ಸೆಂಟರ್, ಲ್ಯಾಬೋರೇಟರಿ ಇತ್ಯಾದಿಗಳ ಸ್ಥಾಪನೆ ಹಾಗೂ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ನೇರ ಸಂಪರ್ಕ ಕಲ್ಪಿಸುವುದು ಇತ್ಯಾದಿ ಚಟುವಟಿಕೆಗಳಿಗೆ ಕಾಯ್ದಿರಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಮೊದಲನೇ ಹಂತದಲ್ಲಿ ಏರೋಸ್ಪೇಸ್ ಪಾರ್ಕ್‌ನಲ್ಲಿ ಸ್ಥಾಪಿತವಾಗುವ ಕೈಗಾರಿಕೆಗಳಿಗೆ ಸೇವೆ ಒದಗಿಸಲು ಅನುಕೂಲವಾಗುವಂತೆ ಹೈಟೆಕ್ ಟೂಲ್‌ರೂಂ ಟೆಸ್ಟಿಂಗ್ ಅಂಡ್ ಕ್ಯಾಲಿಬ್ರೇಷನ್ ಸೆಂಟರ್ ಸ್ಥಾಪಿಸಲು ಉದ್ದೇಶಿಸಿದೆಯೆಂದೂ : ಭಾರತ ಸರ್ಕಾರದ ಎಂಎಸ್‌ಎಂಇ ಮಂತ್ರಾಲಯದ ಅಧೀನದಲ್ಲಿ ಬರುವ ಭಾರತ ಸರ್ಕಾರ, ಎಂಎಸ್‌ಎಂಇ ವಿಭಾಗದ ಸಂಸ್ಥೆಯು ಈ ಯೋಜನೆಯನ್ನು ಅನುಷ್ಠಾನಗೊಳಿಸುತ್ತದೆ. ಯೋಜನೆಯ ಹೆಚ್ಚಾದ ವೆಚ್ಚವನ್ನು ಭಾರತ ಸರ್ಕಾರವು ಭರಿಸಲಿದೆ. ಈ ಉದ್ದೇಶಕ್ಕಾಗಿ ರಾಜ್ಯ ಸರ್ಕಾರದಿಂದ ಬೆಂಗಳೂರು ಏರೋಸ್ಪೇಸ್ ಪಾರ್ಕ್‌ನ ಪ್ಲಾಟ್ ನಂ. ಸಿಎ–6 ರಲ್ಲಿ 10.00 ಎಕರೆ ಭೂಮಿಯನ್ನು ಕೆಐಎಡಿಬಿ ಯಿಂದ ಎಂಎಸ್‌ಎಂಇ ಗೆ ಹಂಚಿಕೆ ಮಾಡಿದ್ದು, ಸದರಿ 10.00 ಎಕರೆ ಭೂಮಿಯ ರಿಯಾಯಿತಿ ಮೊತ್ತ ರೂ. 10.00 ಕೋಟಿಯನ್ನು ಕೆಐಎಡಿಬಿ ಗೆ ಬಿಡುಗಡೆ ಮಾಡಲು 2013–14ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4852–80–004–0–01–211 (Large & Medium Industries Sector) ಅಡಿಯಲ್ಲಿ ಹಂಚಿಕೆಯಾಗಿರುವ ರೂ. 59.66 ಕೋಟಿಯಿಂದ ಭರಿಸಲು ಅವಕಾಶವಿದೆ ಎಂದು, ಆದುದರಿಂದ ಸದರಿ ಲೆಕ್ಕಶೀರ್ಷಿಕೆಯಡಿ ರೂ. 10.00 ಕೋಟಿಯನ್ನು ಕೆಐಎಡಿಬಿ ಗೆ ಬಿಡುಗಡೆ ಮಾಡಬೇಕೆಂದು ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 17 ಎಸ್‌ಪಿಐ 2012 (ಪಿ5), ಬೆಂಗಳೂರು ದಿನಾಂಕ : 14–11–2013.**

ಏರೋಸ್ಪೇಸ್ ಪಾರ್ಕ್‌ನಲ್ಲಿ ಸ್ಥಾಪಿತವಾಗುವ ಕೈಗಾರಿಕೆಗಳಿಗೆ ಸೇವೆ ಒದಗಿಸಲು ಅನುಕೂಲವಾಗುವಂತೆ ಹೈಟೆಕ್ ಟೂಲ್‌ರೂಂ ಟೆಸ್ಟಿಂಗ್ ಅಂಡ್ ಕ್ಯಾಲಿಬ್ರೇಷನ್ ಸೆಂಟರ್ ಸ್ಥಾಪಿಸಲು ರಾಜ್ಯ ಸರ್ಕಾರದಿಂದ ಭಾರತ ಸರ್ಕಾರದ ಎಂಎಸ್‌ಎಂಇ ವಿಭಾಗದ ಸಂಸ್ಥೆಗೆ ಕೆಐಎಡಿಬಿ ಯು ಹಂಚಿಕೆ ಮಾಡಿರುವ 10.00 ಎಕರೆ ಭೂಮಿಯ ರಿಯಾಯಿತಿ ಬೆಲೆಯಾಗಿ, 2013–14ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4852–80–004–0–01–211 Investment (Plan) ಅಡಿ ರೂ. 9.00 ಕೋಟಿ (ಒಂಬತ್ತು ಕೋಟಿ ರೂಪಾಯಿಗಳು ಮಾತ್ರ) ಯನ್ನು ಕೆಐಎಡಿಬಿ ಗೆ ಬಿಡುಗಡೆ ಮಾಡಿದೆ.

ಹಣ ಸ್ವೀಕೃತಿ ರಶೀತಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲುಸಹಿಯೊಂದಿಗೆ ಖಜಾನೆಯಿಂದ ಹಣ ಪಡೆಯಲು ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹಾಗೂ ಕಾರ್ಯ ನಿರ್ವಾಹಕ ಸದಸ್ಯರು, ಕೆಐಎಡಿಬಿ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : FD 1267 Exp/1/2013, ದಿನಾಂಕ : 11–11–2013ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 177**

**ಎಸ್. ಉಮಾದೇವಿ**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** ಆಯ್ಕೆ ಕಾಲಿಕ ವೇತನ ಶ್ರೇಣಿ/ಹಿರಿಯ ವೇತನ ಶ್ರೇಣಿ ಸೌಲಭ್ಯಗಳನ್ನು ರಾಜ್ಯ ವೇತನ ಶ್ರೇಣಿ ಹೊಂದಿರುವ ಎಲ್ಲಾ ಅಧಿಕಾರಿ/ನೌಕರರಿಗೆ ಅನ್ವಯಿಸುವ ಬಗ್ಗೆ.

**ಓದಲಾಗಿದೆ :**

1. ಸ.ಅ.ಜ್ಞಾಸಂ. ಆಇ 105 ಎಸ್‌ಆರ್‌ಪಿ (ಸಿಎಸ್‌ಸಿ) 82, ದಿನಾಂಕ : 08–06–1983.
2. ಸ.ಆ.ಸಂ. ಆಇ 60 ಎಸ್‌ಆರ್‌ಪಿ 1984, ದಿನಾಂಕ : 23–08–1984.
3. ಸ.ಆ.ಸಂ. ಆಇ 25 ಎಸ್‌ಆರ್‌ಪಿ 1991, ದಿನಾಂಕ : 29–10–1991.
4. ಸ.ಆ.ಸಂ. ಆಇ 13 ಎಸ್‌ಆರ್‌ಪಿ 2002, ದಿನಾಂಕ : 09–05–2002.
5. ಸ.ಆ.ಸಂ. ಆಇ 8 ಎಸ್‌ಆರ್‌ಪಿ 2007, ದಿನಾಂಕ : 16–05–2007.
6. ಸ.ಆ.ಸಂ. ಆಇ 31 ಎಸ್‌ಆರ್‌ಪಿ 2007 (III), ದಿನಾಂಕ : 14–08–2008.
7. ಸ.ಆ.ಸಂ. ಆಇ 31 ಎಸ್‌ಆರ್‌ಪಿ 2007 (x), ದಿನಾಂಕ : 14–08–2008.
8. ಸ.ಆ.ಸಂ. ಆಇ 31 ಎಸ್‌ಆರ್‌ಪಿ 2010, ದಿನಾಂಕ : 19–01–2011.
9. ಸ.ಆ.ಸಂ. ಆಇ 12 ಎಸ್‌ಆರ್‌ಪಿ 2012 (8), ದಿನಾಂಕ : 14–06–2012.

**ಪ್ರಸ್ತಾವನೆ :**

ಮುಂಬಡ್ತಿಗೆ ಬೇರೆಲ್ಲಾ ರೀತಿಯಲ್ಲಿ ಅರ್ಹತೆ ಹೊಂದಿದ್ದರೂ ಮುಂಬಡ್ತಿಗೆ ಅವಕಾಶವಿಲ್ಲವೆಂಬ ಕಾರಣಕ್ಕಾಗಿ ಒಂದೇ ಹುದ್ದೆಯಲ್ಲಿ ದೀರ್ಘ ಕಾಲ ಸ್ಥಗಿತಗೊಂಡಿರುವ ರಾಜ್ಯ ವೇತನ ಶ್ರೇಣಿಯ ಮೊದಲ 15 ವೇತನ ಶ್ರೇಣಿಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೆ ಪರಿಹಾರ ನೀಡುವ ಸಲುವಾಗಿ ಕೆಳಕಂಡ ಯೋಜನೆಗಳನ್ನು ಸರ್ಕಾರವು ಜಾರಿಗೊಳಿಸಿರುತ್ತದೆ.

1. ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ–ಮುಂಬಡ್ತಿ) ನಿಯಮಗಳು 1983ರಡಿ ಒಂದೇ ಹುದ್ದೆಯಲ್ಲಿ 10 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿ.
2. ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು, 1991 ರಡಿ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿ.
3. ಮೇಲೆ (4)ರಲ್ಲಿ ಓದಲಾದ ದಿನಾಂಕ : 09–05–2002ರ ಸರ್ಕಾರಿ ಆದೇಶ ಹಾಗೂ (9)ರಲ್ಲಿ ಓದಲಾದ ದಿನಾಂಕ : 14–06–2012ರ ಸರ್ಕಾರಿ ಆದೇಶದಲ್ಲಿ ಒಂದೇ ಹುದ್ದೆಯಲ್ಲಿ ಒಂದೂ ಪದೋನ್ನತಿ ಇಲ್ಲದೆ ಸತತವಾಗಿ 20, 25 ಮತ್ತು 30 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ 1, 2 & 3ನೇ ಹೆಚ್ಚುವರಿ ವೇತನ ಬಡ್ತಿಗಳು.
4. ಮೇಲೆ (7)ರಲ್ಲಿ ಓದಲಾದ ದಿನಾಂಕ : 14–08–2008ರ ಸರ್ಕಾರಿ ಆದೇಶದಲ್ಲಿ 19 ಮತ್ತು 21ನೇ ವೇತನ ಶ್ರೇಣಿಗಳನ್ನು ಹೊಂದಿರುವ ಗ್ರೂಪ್–ಎ ವೃಂದದ ಅಧಿಕಾರಿಗಳಿಗೆ ಆಯ್ಕೆ ದರ್ಜೆ ವೇತನ ಶ್ರೇಣಿ.
5. ಮೇಲೆ (8)ರಲ್ಲಿ ಓದಲಾದ ದಿನಾಂಕ : 19–01–2011ರ ಸರ್ಕಾರಿ ಆದೇಶದಲ್ಲಿ 16ನೇ ವೇತನ ಶ್ರೇಣಿಯನ್ನು ಹೊಂದಿರುವ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ನೇರ ನೇಮಕಾತಿ ಹೊಂದಿದ ಉಪ ನಿರ್ದೇಶಕರುಗಳಿಗೆ ದಿನಾಂಕ : 1–11–2011 ರಿಂದ ಅನ್ವಯವಾಗುವಂತೆ ಆಯ್ಕೆ ಕಾಲಿಕ ವೇತನ ಶ್ರೇಣಿ ಮತ್ತು ಹಿರಿಯ ವೇತನ ಶ್ರೇಣಿ.

ಪ್ರಸ್ತುತ 2011 ರ ಅಧಿಕಾರಿ ವೇತನ ಸಮಿತಿಯು ತನ್ನ ವರದಿಯ ಕಂಡಿಕೆ 8.3.5 ರಲ್ಲಿ ಈ ರೀತಿ ಶಿಫಾರಸ್ಸು ಮಾಡಿರುತ್ತದೆ.

"ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳು 1983 ರಡಿಯಲ್ಲಿ ಆಯ್ಕೆ ಶ್ರೇಣಿಗೆ ಕಾಲಬದ್ಧ ಮುಂಬಡ್ತಿ, ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ಮುಂಬಡ್ತಿ) ನಿಯಮಾವಳಿ 1991 ರನ್ವಯ ಹಿರಿಯ ವೇತನ ಶ್ರೇಣಿಗೆ ಮುಂಬಡ್ತಿ ಮತ್ತು ದಿನಾಂಕ : 09–05–2002ರ ಸರ್ಕಾರಿ ಆದೇಶದಂತೆ 20 ವರ್ಷ ಮುಂಬಡ್ತಿಯಿಲ್ಲದೆ ಒಂದೇ ಹುದ್ದೆಯಲ್ಲಿ ಮುಂದುವರಿದಿದ್ದಲ್ಲಿ ನೀಡುವ ಅಧಿಕ ವೇತನ ಮುಂಬಡ್ತಿ–ಈ ಎಲ್ಲಾ ಸೌಲಭ್ಯಗಳು ಮೊದಲ 15 ವೇತನ ಶ್ರೇಣಿಗಳಲ್ಲಿರುವ ಸರ್ಕಾರಿ ನೌಕರರಿಗೆ ಮಾತ್ರ ಲಭ್ಯವಿದೆಯೆಂಬ ಅಂಶವನ್ನು ಸಮಿತಿಯು ಗಮನಿಸಿದೆ. ಮೊದಲ 15 ವೇತನ ಶ್ರೇಣಿಗಳಿಗಿಂತ ಮೇಲಿನ ವೇತನ ಶ್ರೇಣಿಗಳಲ್ಲಿರುವ ಮತ್ತು ಮುಂಬಡ್ತಿಯಿಲ್ಲದೆ ಒಂದೇ ಹುದ್ದೆಯಲ್ಲಿ ಮುಂದುವರಿಯುತ್ತಿರುವ ಸರ್ಕಾರಿ ನೌಕರರಿಗೆ ಪರಿಹಾರವನ್ನು ಒದಗಿಸುವ ದೃಷ್ಟಿಯಿಂದ ಮೇಲ್ಕಂಡ ಸೌಲಭ್ಯಗಳನ್ನು **ಮೊದಲ 15 ವೇತನ ಶ್ರೇಣಿಗಳಲ್ಲಿರುವ ನೌಕರರಿಗೆ ಸೀಮಿತಗೊಳಿಸದೆ. ಎಲ್ಲಾ ವೇತನ ಶ್ರೇಣಿಯ ನೌಕರರಿಗೂ ಅನ್ವಯಿಸಬೇಕೆಂದು ಸಮಿತಿಯು ಶಿಫಾರಸ್ಸು ಮಾಡುತ್ತದೆ"**

ಅಧಿಕಾರಿ ವೇತನ ಸಮಿತಿ–2011 ರ ಈ ಶಿಫಾರಸ್ಸನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 30 ಎಸ್‌ಆರ್‌ಪಿ 2012, ಬೆಂಗಳೂರು ದಿನಾಂಕ : 31ನೇ ಜನವರಿ 2014.**

ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮ 2012ರಲ್ಲಿನ 16 ರಿಂದ 18ನೇ ವೇತನ ಶ್ರೇಣಿಗಳಲ್ಲಿ ಯಾವುದೇ ಒಂದು ಹುದ್ದೆಯಲ್ಲಿ ದೀರ್ಘ ಕಾಲ ಒಂದೂ ಪದೋನ್ನತಿ ಇಲ್ಲದೆ ಮುಂದುವರಿದಿರುವ ಅಧಿಕಾರಿ/ನೌಕರರಿಗೂ ಈ ಕೆಳಕಂಡ ಸೌಲಭ್ಯಗಳನ್ನು ವಿಸ್ತರಿಸಲು ಸರ್ಕಾರವು ಹರ್ಷಿಸುತ್ತದೆ.

i) 1983ರ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳನ್ವಯ, ಅದರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಆಯ್ಕೆ ಕಾಲಿಕ ವೇತನ ಶ್ರೇಣಿ.

ii) 1991ರ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳಡಿಯಲ್ಲಿ, ಅದರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಹಿರಿಯ ವೇತನ ಶ್ರೇಣಿ.

iii) ದಿನಾಂಕ : 09–05–2002ರ ಸರ್ಕಾರಿ ಆದೇಶ ಸಂಖ್ಯೆ : ಆಇ 13 ಎಸ್‌ಆರ್‌ಪಿ 2002 ಮತ್ತು ದಿನಾಂಕ : 14–06–2012 ರ ಸರ್ಕಾರಿ ಆದೇಶ ಸಂಖ್ಯೆ : ಆಇ 12 ಎಸ್‌ಆರ್‌ಪಿ 2012ರಲ್ಲಿ ನಿಗದಿಪಡಿಸಿರುವ ಷರತ್ತುಗಳಿಗೆ ಒಳಪಟ್ಟು ಅದರಲ್ಲಿ ಒಳಗೊಂಡಿರುವ 1,2 & 3ನೇ ಹೆಚ್ಚುವರಿ ವೇತನ ಬಡ್ತಿ.

2. ಕರ್ನಾಟಕ ರಾಜ್ಯ ನಾಗರೀಕ ಸೇವೆಯಲ್ಲಿ ಈ ಕೆಳಗಿನ ರಾಜ್ಯ ವೇತನ ಶ್ರೇಣಿಗಳನ್ನು ಹೊಂದಿರುವ 'ಎ' ಗುಂಪಿನ ಅಧಿಕಾರಿಗಳಿಗೂ ಆಯ್ಕೆ ದರ್ಜೆ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ :

i) ವೇತನ ಶ್ರೇಣಿ ರೂ. 38100–55200 ರಲ್ಲಿ ಕನಿಷ್ಠ 8 ವರ್ಷಗಳ ಸೇವೆಯನ್ನು ಪೂರೈಸಿದ ಅಧಿಕಾರಿಗಳಿಗೆ ರೂ. 40050–56550 ಗಳ ಆಯ್ಕೆ ದರ್ಜೆ ವೇತನ ಶ್ರೇಣಿ.

ii) ವೇತನ ಶ್ರೇಣಿ ರೂ. 44250–60600 ರಲ್ಲಿ ಕನಿಷ್ಠ 6 ವರ್ಷಗಳ ಸೇವೆಯನ್ನು ಪೂರೈಸಿದ ಅಧಿಕಾರಿಗಳಿಗೆ ರೂ. 48900–63600ಗಳ ಆಯ್ಕೆ ದರ್ಜೆ ವೇತನ ಶ್ರೇಣಿ.

iii) ವೇತನ ಶ್ರೇಣಿ ರೂ. 48900–63600 ರಲ್ಲಿ ಕನಿಷ್ಠ 6 ವರ್ಷಗಳ ಸೇವೆಯನ್ನು ಪೂರೈಸಿದ ಅಧಿಕಾರಿಗಳಿಗೆ ರೂ. 52500–73000 ಗಳ ಆಯ್ಕೆ ದರ್ಜೆ ವೇತನ ಶ್ರೇಣಿ.

iv) ವೇತನ ಶ್ರೇಣಿ ರೂ. 52500–73000 ರಲ್ಲಿ ಕನಿಷ್ಠ 6 ವರ್ಷಗಳ ಸೇವೆಯನ್ನು ಪೂರೈಸಿದ ಅಧಿಕಾರಿಗಳಿಗೆ ರೂ. 56550–79800 ಗಳ ಆಯ್ಕೆ ದರ್ಜೆ ವೇತನ ಶ್ರೇಣಿ.

3. ಆಯ್ಕೆ ದರ್ಜೆ ವೇತನ ಶ್ರೇಣಿಯು ಸೇವೆಯಲ್ಲಿ ಒಂದು ಬಾರಿ ಮಾತ್ರ ಲಭ್ಯವಾಗತಕ್ಕದ್ದು.

4. ಮೇಲಿನ ಕಂಡಿಕೆ 2 ರಲ್ಲಿನ ಆಯ್ಕೆ ದರ್ಜೆ ವೇತನ ಶ್ರೇಣಿ ಮಂಜೂರಾತಿಗೆ ಸ.ಆ.ಸಂ. ಆಇ 31 ಎಸ್‌ಆರ್‌ಪಿ 2007 (X) ದಿನಾಂಕ : 14–08–2008ರಲ್ಲಿನ ಷರತ್ತುಗಳು ಮುಂದುವರಿದು ಅನ್ವಯಿಸುತ್ತದೆ.

5. ರಾಜ್ಯ ವೇತನ ಶ್ರೇಣಿಯ 25ನೇ ವೇತನ ಶ್ರೇಣಿಯು ಕೊನೆಯ ವೇತನ ಶ್ರೇಣಿಯಾಗಿದ್ದು ಈ ವೇತನ ಶ್ರೇಣಿ ಹೊಂದಿರುವ ಹುದ್ದೆಗಳಿಗೆ ಯಾವುದೇ ಆಯ್ಕೆ ಕಾಲಿಕ ವೇತನ ಶ್ರೇಣಿ ಲಭ್ಯವಿರುವುದಿಲ್ಲ. ಆದ್ದರಿಂದ 25ನೇ ವೇತನ ಶ್ರೇಣಿಯಲ್ಲಿ, ಯಾವುದೇ ಮುಂಬಡ್ತಿಯಿಲ್ಲದೆ 6 ವರ್ಷಗಳ ಸತತ ಸೇವೆ ಸಲ್ಲಿಸುವ 'ಎ' ಗುಂಪಿನ ಅಧಿಕಾರಿಗಳಿಗೆ ಅದೇ ವೇತನ ಶ್ರೇಣಿಯಲ್ಲಿ ಒಂದು ಹೆಚ್ಚುವರಿ ವೇತನ ಬಡ್ತಿ ನೀಡತಕ್ಕದ್ದು.

6. 1983ರ ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳಿಗೆ ಮತ್ತು 1991ರ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳಿಗೆ ಅವಶ್ಯ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

7. ಈ ಆದೇಶದ ಸೌಲಭ್ಯವನ್ನು ರಾಜ್ಯ ಸರ್ಕಾರದ ಅನುದಾನಿತ ಶಾಲಾ/ಕಾಲೇಜುಗಳ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಸೂಕ್ತವಾಗಿ ಪರಿಶೀಲಿಸಿ ಮಂಜೂರು ಮಾಡತಕ್ಕದ್ದು ಅಥವಾ ಅವಶ್ಯವಿದ್ದಲ್ಲಿ ಸಂಬಂಧಪಟ್ಟ ಆಡಳಿತ ಇಲಾಖೆಯ ಮುಖಾಂತರ ಆರ್ಥಿಕ ಇಲಾಖೆಯನ್ನು ಸಂಪರ್ಕಿಸತಕ್ಕದ್ದು.

8. ರಾಜ್ಯ ವೇತನ ಶ್ರೇಣಿ 16 ರಿಂದ 18ರವರೆಗಿನ ವೇತನ ಶ್ರೇಣಿಗಳಿಗೆ ಲಭ್ಯವಿರುವ ಆಯ್ಕೆ ಕಾಲಿಕ ವೇತನ ಶ್ರೇಣಿಗಳನ್ನು ಅನುಬಂಧ I ರಲ್ಲಿ ಸೂಚಿಸಿದೆ.

9. ಈ ಆದೇಶವು ದಿನಾಂಕ : 01–02–2014 ರಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

## ಅನುಬಂಧ– I

| ಕ್ರಮ ಸಂಖ್ಯೆ | ವೇತನ ಶ್ರೇಣಿ ರೂ. | ಆಯ್ಕೆ ಕಾಲಿಕ ವೇತನ ಶ್ರೇಣಿ ರೂ. |
|---|---|---|
| 1. | 28100–700–28800–800–33600–900–39000–1050–45300–1200–50100 | 30400–800–33600–900–39000–1050–45300–1200–51300 |
| 2. | 30400–800–33600–900–39000–1050–45300–1200–51300 | 32800–800–33600–900–39000–1050–45300–1200–52500 |

| ಕ್ರಮ ಸಂಖ್ಯೆ | ವೇತನ ಶ್ರೇಣಿ ರೂ. | ಆಯ್ಕೆ ಕಾಲಿಕ ವೇತನ ಶ್ರೇಣಿ ರೂ. |
|---|---|---|
| 3. | 32800–800–33600–900–39000–1050–45300–1200–52500 | 36300–900–39000–1050–45300–1200–52500–1350–53850 |

ಸುಂದರ ರಾಜ ಗುಪ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

P.R. 178
SC-300

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಪನ್ನಾಲೆ ಜಗನ್ನಾಥ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಇವರ ವಿರುದ್ಧ ಇಲಾಖಾ ವಿಚಾರಣೆ– ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆಇ 2 ವಾತೆತ 2005, ದಿನಾಂಕ : 15–07–2009.
2. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ : 10–11–2011.
3. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ : ಆಇ 2 ವಾತೆತ 2005, ದಿನಾಂಕ : 04–05–2012.
4. 2ನೇ ಕಾರಣ ಕೇಳುವ ನೋಟೀಸಿಗೆ ಶ್ರೀ ಪನ್ನಾಲೆ ಜಗನ್ನಾಥ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ಸಮಜಾಯಿಷಿ ದಿನಾಂಕ : 03–07–2012.

**ಪ್ರಸ್ತಾವನೆ :**

ಶ್ರೀ ಪನ್ನಾಲೆ ಜಗನ್ನಾಥ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರು ಈ ಹಿಂದೆ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಜಮಖಂಡಿ ಈ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (1) ಮಾರಾಟಗಾರರ ಅಂಗಡಿಗಳಿಗೆ ನುಗ್ಗಿ ಡೈರಿ ಹಾಗೂ ಇತರ ಲೆಕ್ಕಪುಸ್ತಕಗಳನ್ನು ಅನಧಿಕೃತವಾಗಿ ವಶಪಡಿಸಿಕೊಂಡು ಬಂದು, ತೆರಿಗೆ ಸಲಹೆಗಾರರನ್ನು ಕರೆತರದಂತೆ ಬ್ಲಾಕ್ ಮೇಲ್ ಮಾಡಿ ಹಣ ಸುಲಿಯುತ್ತಿದ್ದ, (2) ನಮೂನೆ 3 ಮತ್ತು 4 ನ್ನು ನಿಗದಿತ ಅವಧಿಯೊಳಗೆ ಸಲ್ಲಿಸದ ಕರದಾತರು/ತೆರಿಗೆ ಸಲಹೆಗಾರರ ಸಮ್ಮತಿ ಪಡೆಯದೇ ಏಕಪಕ್ಷೀಯವಾಗಿ ರಾಜೀ ಶುಲ್ಕವನ್ನು ವಿಧಿಸಿ ಕಾನೂನು ಬಾಹಿರವಾಗಿ ವರ್ತಿಸಿ ಕರ್ನಾಟಕ ಮಾರಾಟ ತೆರಿಗೆ ಕಾಯ್ದೆ ಸೆಕ್ಷನ್ 31ನ್ನು ಉಲ್ಲಂಘಿಸಿ ತೀವ್ರ ದುರ್ನಡತೆ ಎಸಗಿದ ಹಾಗೂ (3) ಕಾನೂನು ಬಾಹಿರವಾಗಿ ಕಾರ್ಯಗಳನ್ನು ನಿರ್ವಹಿಸಿ ಸಾರ್ವಜನಿಕರು ಹಾಗೂ ಜನ ಪ್ರತಿನಿಧಿಗಳು ಹಾಗೂ ಸಾರ್ವಜನಿಕ ಮಾಧ್ಯಮಗಳಲ್ಲಿ ಇಲಾಖೆಯ ಬಗ್ಗೆ ಕೆಟ್ಟ ಅಭಿಪ್ರಾಯ ಮೂಡಲು ಕಾರಣರಾಗಿ ಸರ್ಕಾರಿ ನೌಕರನಿಗೆ ತಕ್ಕದಲ್ಲದ ರೀತಿಯಲ್ಲಿ ನಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 3(1)ನ್ನು ಉಲ್ಲಂಘಿಸಿದ ಆರೋಪಗಳಿಗಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ : 15–07–2009ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಡಿ.ಕೆ. ಗಾಂವ್‌ಕರ್, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಜಾರಿ ಮತ್ತು ವಸೂಲಿ), ಮಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಯವರು ಮೇಲೆ (2)ರಲ್ಲಿ ಓದಲಾದ ದಿನಾಂಕ : 10–11–2011ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಆರೋಪಿಯು ದಿನಾಂಕ : 22–11–2010 ರಂದು ಪ್ರಾರಂಭಿಕ ವಿಚಾರಣೆಗೆ ಹಾಜರಾಗಿ ಈ ಹಿಂದೆ ಕೋರಿದ ಕೆಲವು ದಾಖಲೆಗಳು ಒದಗಿಸಲ್ಪಟ್ಟಿಲ್ಲವೆಂದು ತಿಳಿಸಿದ್ದಾರೆ. ಮಂಡನಾಧಿಕಾರಿಗಳು ಪ್ರಕರಣಕ್ಕೆ ಸಂಬಂಧಪಟ್ಟ ಎಲ್ಲಾ ದಾಖಲೆಗಳನ್ನು ದಿನಾಂಕ : 28–03–2006ರಂದು ಒದಗಿಸಲಾಗಿದ್ದು, ಪ್ರಕರಣಕ್ಕೆ ಸಂಬಂಧಪಡದ ದಾಖಲೆಗಳನ್ನು ಮಾತ್ರ ನಿರಾಕರಿಸಲಾಗಿದೆ ಎಂದೂ ತಿಳಿಸಿದರು. ಆರೋಪಿಯು ಮತ್ತು ದಿನಾಂಕ : 29–03–2011ರ ಮನವಿ ಸಲ್ಲಿಸಿ ಕೆಲವು ದಾಖಲಾತಿಗಳನ್ನು ಕೋರಿದ್ದಾರೆ. ಆದರೆ ಅವುಗಳು ಆರೋಪಗಳಿಗೆ ಸಂಬಂಧಪಡದ ಕಾರಣ ಅವುಗಳನ್ನು ವಿಚಾರಣಾಧಿಕಾರಿಯ ವತಿಯಿಂದಲೂ ನಿರಾಕರಿಸಲಾಯಿತು. ಆದರೂ ಹೆಚ್ಚಿನ ದಾಖಲಾತಿ ಕೋರಿ ಅಧಿಕಾರಿಯು ಪದೇ ಪದೇ ಮನವಿ ಸಲ್ಲಿಸುತ್ತಿದ್ದು ಇದು ವಿಚಾರಣೆಯನ್ನು ವಿಳಂಬಗೊಳಿಸುವ ತಂತ್ರ ಎಂದು ಪರಿಗಣಿಸಿ ಸಾಕ್ಷಿಗಳ ಮುಖ್ಯ ವಿಚಾರಣೆಯನ್ನು ಜರುಗಿಸಲಾಯಿತು. ಸಾಕ್ಷಿಗಳ ಪೈಕಿ ಎಂಟು ಮಂದಿ ಜಮಖಂಡಿಯಲ್ಲಿಯೇ ಇದ್ದು ಅಲ್ಲಿಯೇ ವಿಚಾರಣೆ ನಡೆಸುವಂತೆ ಕೋರಿಕೆ ಸಲ್ಲಿಸಿದ ಕಾರಣ ದಿನಾಂಕ : 08–04–2001 ರಂದು ಜಮಖಂಡಿಯಲ್ಲೇ ವಿಚಾರಣೆ ನಡೆಸಲಾಯಿತು. ಆ ಎಂಟು ಮಂದಿಯೂ ಹಾಜರಾಗಿ ಸಾಕ್ಷ್ಯ ನೀಡಿದರು. ಆದರೆ ಯಾವ ದಿನಾಂಕದಂದೂ ಆರೋಪಿತ ಅಧಿಕಾರಿಯು ವಿಚಾರಣೆಗೆ ಹಾಜರಾಗಲಿಲ್ಲ. ಯಾವ ಸಾಕ್ಷಿಯನ್ನೂ ಪಾಟೀ ಸವಾಲಿಗೆ ಒಳಪಡಿಸಲಿಲ್ಲ.

ಬಹುತೇಕ ವ್ಯಾಪಾರಿಗಳಾದ ಸಾಕ್ಷಿದಾರರು ನೀಡಿದ ಸಾಕ್ಷ್ಯಗಳಲ್ಲಿ ಈಗಾಗಲೇ ಆರೋಪಿತರ ಮೇಲಧಿಕಾರಿಗಳಿಗೆ ನೀಡಿದ ದೂರು, ತ್ರಿಸದಸ್ಯ ಸಮಿತಿಗೆ ನೀಡಿದ ಹೇಳಿಕೆ ಇವುಗಳಿಂದಾಗಿ ಆರೋಪಿಯು ವರ್ತಕರಿಗೆ ಕಿರುಕುಳ ನೀಡಿರುವ ಆರೋಪವು ಮೇಲ್ನೋಟಕ್ಕೆ ನಿಜವೆಂದು ಕಂಡುಬಂದರೂ ಸಹ ಸಾಕ್ಷಿಗಳು ತಮ್ಮ ಹೇಳಿಕೆಗೆ ಯಾವುದೇ ದಾಖಲೆ ಪುರಾವೆಗಳನ್ನು ಒದಗಿಸಿರುವುದಿಲ್ಲ. ಅವರು ಮಾಡಿದ ಆರೋಪಗಳು ನಿಜವಿದ್ದರೂ ಸಹ ಸಾಕ್ಷ್ಯಾಧಾರಗಳನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿದ ನಂತರವೇ ಅಭಿಪ್ರಾಯ ನೀಡಬೇಕಾಗಿತ್ತು. ದೂರುಗಳನ್ನು ಬಿಟ್ಟು ಬೇರಾವ ಪುರಾವೆಯೂ ಇಲ್ಲದ ಕಾರಣ ವರ್ತಕರಿಗೆ ಕಿರುಕುಳ ನೀಡಿದ ಒಂದನೇ ಆರೋಪ ಸಾಬೀತಾಗಿಲ್ಲ.

ಆರೋಪ 2 ರ ಬಗ್ಗೆ ಸಾಕ್ಷ್ಯ ನುಡಿದ ನಿವೃತ್ತ ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು, ಆರೋಪಿ ಅಧಿಕಾರಿಯಿಂದ ಕಾನೂನು ಬಾಹಿರವಾಗಿ ಹೇರಲ್ಪಟ್ಟ ರಾಜೀ ಹಣದ ಕುರಿತ ಪ್ರಕರಣಗಳನ್ನು ಉಲ್ಲೇಖಿಸಿದ್ದಾರೆ. ಅಂತಹಾ 6 ಪ್ರಕರಣಗಳನ್ನು ಗುರುತಿಸಿದ್ದು ಮಹಾಲಿಂಗಪುರದ ಒಂದು ಪ್ರಕರಣದಲ್ಲಿ ಪ್ರಾಥಮಿಕ ನೇಕಾರರ ಸಹಕಾರ ಸಂಘಕ್ಕೆ ಸಂಬಂಧಿಸಿದಂತೆ, ಜಮಖಂಡಿಯ 2 ಪ್ರಕರಣಗಳಲ್ಲಿ ಬೀಡಿ ವರ್ಕ್ಸ್‌ಗೆ ಸಂಬಂಧಿಸಿದಂತೆ, ಲಿಂಗನೂರಿನ ಸಿವಿಲ್ ಕಂಟ್ರಾಕ್ಟರ್ ಪ್ರಕರಣ, ತೊದಲಬಾಗಿಯ ಮೆಡಿಕಲ್ ಸ್ಟೋರ್ಸ್ ಪ್ರಕರಣ ಹಾಗೂ ಎಸ್.ಎಸ್. ಕಲಾದಗಿ ಪ್ರಕರಣಗಳಲ್ಲಿ ರಾಜೀ ದಂಡ ವಿಧಿಸಿದ ದಾಖಲೆಗಳನ್ನು ಗುರುತಿಸಿದ್ದಾರೆ. ಆರೋಪಿತ ಅಧಿಕಾರಿಯು ತನ್ನ ರಾಜೀ ದಂಡ ವಿಧಿಸುವ ಪ್ರಸ್ತಾವನೆಗೆ ವರ್ತಕರಿಂದ ಸಹಿ ಪಡೆದಿದ್ದಾರೆ. ಆದರೆ, ಕರ್ನಾಟಕ ಮಾರಾಟ

ತೆರಿಗೆ ಕಾಯಿದೆ 1957ರ ಸೆಕ್ಷನ್ 31ರನ್ವಯ ಯಾವುದೇ ಅಪರಾಧವನ್ನು ಇಲಾಖೆಯ ಮೂಲಕ ರಾಜೀ ಮಾಡಿಕೊಳ್ಳುವುದಾದಲ್ಲಿ ಅದಕ್ಕೆ ಸಂಬಂಧಪಟ್ಟ ಕರದಾತರಿಂದಾಗಲೀ, ತೆರಿಗೆ ಸಲಹೆಗಾರರಿಂದಾಗಲೀ ಲಿಖಿತ ಒಪ್ಪಿಗೆ ಪಡೆಯಬೇಕು. ಈ ರೀತಿ ಪಡೆದಿಲ್ಲದ ಕಾರಣಕ್ಕಾಗಿಯೇ ಮೇಲ್ಮನವಿ ಪ್ರಾಧಿಕಾರಿಗಳು ಆರೋಪಿಯ ಆದೇಶಗಳನ್ನು ಅಸಿಂಧುಗೊಳಿಸಿದ್ದಾರೆ. ಶಾಸನಬದ್ಧ ಅಗತ್ಯತೆಯನ್ನು ಪಾಲಿಸದಿರುವುದು ತೀವ್ರ ದುರ್ನಡತೆಯೇ ಆಗಿದೆ. ಈ ಕಾರಣದಿಂದಾಗಿ ನಮೂನೆ 3 ಮತ್ತು 4 ನ್ನು ನಿಗದಿತ ಅವಧಿಯೊಳಗೆ ಸಲ್ಲಿಸದ ಕರದಾರರು/ತೆರಿಗೆ ಸಲಹೆಗಾರರ ಸಮ್ಮತಿ ಪಡೆಯದೇ ಏಕಪಕ್ಷೀಯವಾಗಿ ರಾಜೀ ಶುಲ್ಕವನ್ನು ವಿಧಿಸಿ ಮಾರಾಟ ತೆರಿಗೆ ಕಾಯಿದೆ 1957ರ ಸೆಕ್ಷನ್ 31ನ್ನು ಉಲ್ಲಂಘಿಸಿದ 2ನೇ ಆರೋಪ ಸಾಬೀತಾಗಿದೆ.

ವರ್ತಕರು, ಅದರಲ್ಲೂ ಆಭರಣಗಳ ತಯಾರಕರು ಹಾಗೂ ಮಾರಾಟಗಾರರ ಮೇಲೆ ಆರೋಪಿತ ಅಧಿಕಾರಿಯು ಸುಲಿಗೆ ನಡೆಸುತ್ತಿದ್ದಾರೆಂದು ಸಾರ್ವಜನಿಕ ಮಾಧ್ಯಮಗಳಲ್ಲಿ ಸುದ್ದಿ ಪ್ರಕಟವಾಗಿದ್ದು ಅದನ್ನು ಪ್ರಕಟಿಸಿದ ಪತ್ರಿಕೆಯ ಸಂಪಾದಕರು ಸಮನ್ಸ್ ನೀಡಿದರೂ ಸಹ ವಿಚಾರಣೆಯಲ್ಲಿ ಹಾಜರಾಗಿ ಸಾಕ್ಷ್ಯ ನುಡಿಯಲಿಲ್ಲ. ಆದ್ದರಿಂದ ಕಾನೂನು ಬಾಹಿರವಾಗಿ ಕಾರ್ಯನಿರ್ವಹಿಸಿ ಸಾರ್ವಜನಿಕರು, ಜನಪ್ರತಿನಿಧಿಗಳು ಹಾಗೂ ಸಾರ್ವಜನಿಕ ಮಾಧ್ಯಮಗಳಲ್ಲಿ ಇಲಾಖೆಯ ಬಗ್ಗೆ ಕೆಟ್ಟ ಅಭಿಪ್ರಾಯ ಮೂಡಲು ಕಾರಣರಾದ ಮೂರನೇ ಆರೋಪ ಸಾಬೀತಾಗಿಲ್ಲ.

ವಿಚಾರಣಾ ವರದಿಯ ಪ್ರತಿಯೊಡನೆ ಆರೋಪಿತ ಅಧಿಕಾರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ : 04-05-2012ರ ಎರಡನೇ ನೋಟೀಸ್ ನೀಡಿ ವಿಚಾರಣೆ ವರದಿಯ ಕುರಿತು ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸ್‌ಗೆ ಆರೋಪಿತ ಅಧಿಕಾರಿ ಶ್ರೀ ಪನ್ಸಾಲೆ ಜಗನ್ನಾಥ್ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ : 03-07-2012ರ ಉತ್ತರ ನೀಡಿ ಆರೋಪಿತ ಕಾರ್ಯಗಳಲ್ಲಿ ತಮಗೆ ಸಹಾಯ ನೀಡಿದ ವಾಣಿಜ್ಯ ತೆರಿಗೆ ಪರಿವೀಕ್ಷಕರು ಹಾಗೂ ಕರವಸೂಲಿಗಾರರ ವಿರುದ್ಧ ಯಾವ ಕ್ರಮವನ್ನೂ ಕೈಗೊಳ್ಳದೇ ತಮ್ಮ ಮೇಲೆ ಮಾತ್ರ ಇಲಾಖಾ ವಿಚಾರಣೆ ನಡೆಸಲಾಗಿದೆ. ತಮ್ಮನ್ನು ವಿಚಾರಣೆಯಲ್ಲಿ ಸಮರ್ಥಿಸಿಕೊಳ್ಳಲು ಅಗತ್ಯವಾದ ದಾಖಲೆಗಳನ್ನು ಕೋರಿದರೂ ಕೊಡದೇ ವಿಚಾರಣೆ ನಡೆಸಲಾಗಿದೆ. ತಾನು ಸದ್ಭಾವನೆಯಿಂದಲೇ ರಾಜೀ ದಂಡ ವಿಧಿಸಿದ್ದು, ಇದಕ್ಕಾಗಿ ತಮ್ಮ ವಿರುದ್ಧ ದಂಡನೆ ವಿಧಿಸದೇ ಆರೋಪ ಮುಕ್ತರನ್ನಾಗಿಸಬೇಕೆಂದು ಕೋರಿದ್ದಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಲಾಗಿ, ವಿಚಾರಣೆಯಲ್ಲಿ ಆರೋಪಿಗೆ ಎಲ್ಲಾ ಅವಕಾಶಗಳನ್ನು ನೀಡಲಾಗಿದ್ದರೂ ಆರೋಪಿಯು ವಿಚಾರಣೆಗೆ ಹಾಜರಾಗಿ ಆ ಅವಕಾಶಗಳನ್ನು ಬಳಸಿಕೊಳ್ಳಲಿಲ್ಲ. ಈ ಬಗ್ಗೆ ಇವರು ನಿರ್ವಹಿಸಿರುವ ದಾಖಲೆಗಳನ್ನು ನೋಡಲಾಗಿ ಇವರ ನಿರ್ಣಯಕ್ಕೆ ಸಮ್ಮತಿಸಿರುವ ಕುರಿತು ಕರದಾತರಾಗಲೀ, ತೆರಿಗೆ ಸಲಹೆಗಾರರಾಗಲೀ ಸಹಿ ಮಾಡಿರುವುದಿಲ್ಲ. ಈ ಕಾರಣದಿಂದಾಗಿ ಇವರಿಗೆ ಸದ್ಭಾವನೆಯ ರಕ್ಷಣೆ ದೊರೆಯುವುದಿಲ್ಲ. ಆದ್ದರಿಂದ ಆರೋಪಿತರ ವಾದವನ್ನು ಒಪ್ಪಿಕೊಳ್ಳದೇ ಇವರಿಂದ ದುರ್ನಡತೆ ಉಂಟಾಗಿದ್ದು, ಎರಡನೇ ಆರೋಪ ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯ ಒಪ್ಪಿಕೊಂಡು, ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 2 ವಾತೆತ 2005, ಬೆಂಗಳೂರು ದಿನಾಂಕ : 22-11-2013.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11, 11-ಎ ರೊಡನೆ ಓದಿಕೊಂಡಂತೆ ನಿಯಮ 8(iv-ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪನ್ಸಾಲೆ ಜಗನ್ನಾಥ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ವೇತನವನ್ನು ವೇತನ ಶ್ರೇಣಿ ರೂ. 28100-700-28800-800-33600-900-39000-1050-45300-1200-50100 ರಲ್ಲಿ ಪ್ರಸ್ತುತ ಪಡೆಯುತ್ತಿರುವ ರೂ. 39,000/- ಗಳಿಂದ 4 ಹಂತ ಕೆಳಕ್ಕೆ ಅಂದರೆ ರೂ. 35,400/-ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 3 ವರ್ಷಗಳ ಅವಧಿಗೆ ಇಳಿಸುವ ದಂಡನೆ ವಿಧಿಸಿದೆ. ಈ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದುವರಿಸುವ ಪರಿಣಾಮ ಬೀರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 179

**ಎಸ್.ಬಿ. ಅಳವಂಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ-2 & ಸಮನ್ವಯ).

## ಆರ್ಥಿಕ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಆಇ 12 ಎಸ್‌ಆರ್‌ಪಿ 2012 (IX), ಬೆಂಗಳೂರು, ದಿನಾಂಕ : 05-02-2014.**

ಸರ್ಕಾರಿ ಆದೇಶ ಸಂಖ್ಯೆ : ಆಇ 12 ಎಸ್‌ಆರ್‌ಪಿ 2012 (IX), ದಿನಾಂಕ : 14-06-2012ರ ಕ್ರಮ ಸಂಖ್ಯೆ : 22ರ (vi) ರಲ್ಲಿ "Corps of Detectives" ಎಂದಿರುವುದನ್ನು "Criminal Investigation Department" ಎಂಬುದಾಗಿ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR. 180

SC-500

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-2).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯ ಶ್ರೀಮತಿ ಹೆಚ್.ಆರ್. ಸರೋಜಮ್ಮ, ವಸತಿ ಯೋಜನೆಯ ಜಮೀನನ್ನು ಸರ್ಕಾರಿ ವೈದ್ಯಕೀಯ ಕಾಲೇಜು ಸ್ಥಾಪಿಸಲು ನೀಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 50 ಗುಅಪ್ರಾ 2012, ದಿನಾಂಕ : 05-11-2012,
2. ಆಯುಕ್ತರು, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರ, ಇವರ ಪತ್ರ ಸಂಖ್ಯೆ : ಕೊನಪ್ರಾ/ಆಡಳಿತ/ವೈಕಾನಿ/123/2013-14, ದಿನಾಂಕ : 27-06-2013.

3. ಜಿಲ್ಲಾಧಿಕಾರಿ, ಕೊಪ್ಪಳ ಜಿಲ್ಲೆ ಇವರ ಪತ್ರ ಸಂಖ್ಯೆ : ಕಸಂ/11231/ಕಂದಾಯ/ಭೂಸ್ವಾ/14/2013-14/6960, ದಿನಾಂಕ : 28-09-2013 ಮತ್ತು 25-09-2013.
4. ವೈದ್ಯಕೀಯ ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಕುಕ 310 ಕೆಎಂ 2011, ದಿನಾಂಕ : 16-11-2005.
5. ದಿನಾಂಕ : 28-01-2014ರಂದು ನಡೆದ ಸಚಿವ ಸಂಪುಟ ಸಭೆಯ ವಿಷಯಸೂಚಿ ಸಂಖ್ಯೆ : ಸಿ.58/2014.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 05-11-2012ರ ಆದೇಶದಲ್ಲಿ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ 24 ಎಕರೆ 28 ಗುಂಟೆ ಜಮೀನಿನಲ್ಲಿ ರೂ. 1060.00 ಲಕ್ಷಗಳ ಮೊತ್ತದಲ್ಲಿ ವಸತಿ ಬಡಾವಣೆಯನ್ನು ನಿರ್ಮಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಸರ್ವೆ ನಂ. 152/1.2 ಮತ್ತು 154/1ರ ಒಟ್ಟು ವಿಸ್ತೀರ್ಣದಲ್ಲಿ ರೂ. 1060.00 ಲಕ್ಷಗಳ ಮೊತ್ತದಲ್ಲಿ ಬಡಾವಣೆಯನ್ನು ನಿರ್ಮಿಸಲು ಸರ್ಕಾರವು ಅನುಮೋದನೆಯನ್ನು ನೀಡಿದ್ದು, ಅದರಂತೆ ವಸತಿ ವಿನ್ಯಾಸವನ್ನು ರಚಿಸಲಾಗಿದೆ ಎಂದು ತಿಳಿಸುತ್ತಾ, ಒಟ್ಟು 364 ವಿವಿಧ ಅಳತೆಯ ನಿವೇಶನಗಳು ಲಭ್ಯವಿದ್ದು, ಸಾರ್ವಜನಿಕರಿಂದ ನಿವೇಶನ ಬಯಸಿ ಕೇವಲ 84 ಅರ್ಜಿಗಳು ಮಾತ್ರ ಬಂದಿರುವುದಾಗಿ ತಿಳಿಸಿರುತ್ತಾರೆ. ಮುಂದುವರೆದು, ಸರ್ಕಾರದ ವತಿಯಿಂದ ಕೊಪ್ಪಳ ನಗರ ವ್ಯಾಪ್ತಿಯಲ್ಲಿ ಹೊಸ ವೈದ್ಯಕೀಯ ಕಾಲೇಜನ್ನು ನಿರ್ಮಿಸಲು ಸ್ಥಳಾವಕಾಶದ ಅವಶ್ಯಕತೆ ಇರುವುದರಿಂದ, ಪ್ರಾಧಿಕಾರದ ದಿನಾಂಕ : 24-06-2013 ರಂದು ನಡೆದ ಸಭೆಯಲ್ಲಿ ಶ್ರೀಮತಿ ಹೆಚ್.ಆರ್. ಸರೋಜಮ್ಮ ವಸತಿ ಬಡಾವಣೆಯಲ್ಲಿನ ಜಮೀನನ್ನು ನೂತನ ವೈದ್ಯಕೀಯ ಕಾಲೇಜು ಪ್ರಾರಂಭಿಸುವ ಸಲುವಾಗಿ ಹಸ್ತಾಂತರಿಸಲು ನಿರ್ಧರಿಸಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕೊಪ್ಪಳ ಜಿಲ್ಲಾಧಿಕಾರಿಗಳ ದಿನಾಂಕ : 28-09-2013ರ ಪತ್ರದಲ್ಲಿ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದ ಶ್ರೀಮತಿ ಹೆಚ್.ಆರ್. ಸರೋಜಮ್ಮ ಬಡಾವಣೆಯಲ್ಲಿ ನಿವೇಶನ ಪಡೆಯಲು ಒಟ್ಟು 84 ಅರ್ಜಿದಾರರು ಅರ್ಜಿಯನ್ನು ಸಲ್ಲಿಸಿರುವುದರಿಂದ, ಈ ಉದ್ದೇಶಕ್ಕಾಗಿ ಭೂಸ್ವಾಧೀನ ಪಡಿಸಿಕೊಂಡಿರುವ ಒಟ್ಟು 24 ಎಕರೆ ಗುಂಟೆ ಜಮೀನಿನಲ್ಲಿ 84 ಅರ್ಜಿದಾರರಿಗೆ ನಿವೇಶನಗಳನ್ನು ಒದಗಿಸಲು ಅಗತ್ಯವಿರುವ 9-00 ಎಕರೆ ಜಮೀನನ್ನು ಕಾಯ್ದಿರಿಸಿಕೊಂಡು ಇನ್ನುಳಿದ 15 ಎಕರೆ 28 ಗುಂಟೆ ವಿಸ್ತೀರ್ಣದ ಜಮೀನನ್ನು ಹೊಸದಾಗಿ ಪ್ರಾರಂಭಿಸಲಿರುವ ವೈದ್ಯಕೀಯ ಕಾಲೇಜಿಗಾಗಿ ಕೊಪ್ಪಳ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ಹಸ್ತಾಂತರಿಸಬೇಕೆಂದು ದಿನಾಂಕ : 02-09-2013 ರಂದು ನಡೆದ ಕೊಪ್ಪಳ ನಗರಾಭಿವೃದ್ಧಿ ಸಭೆಯಲ್ಲಿ ತೀರ್ಮಾನಿಸಲಾಗಿದೆ ಎಂದು ತಿಳಿಸಿರುತ್ತಾರೆ. ಮುಂದುವರೆದು, ದಿನಾಂಕ : 25-09-2013ರ ಪತ್ರದಲ್ಲಿ ಪ್ರಾಧಿಕಾರದ 15 ಎಕರೆ 28 ಗುಂಟೆ ಜಮೀನಿಗೆ ಪರ್ಯಾಯವಾಗಿ ರೂ. 5,32,26,527/-ಗಳನ್ನು ಪ್ರಾಧಿಕಾರಕ್ಕೆ ಪಾವತಿಸಲು ವೈದ್ಯಕೀಯ ಶಿಕ್ಷಣ ಇಲಾಖೆಯ ಅನುಮೋದನೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಅನಧಿಕೃತ ಟಿಪ್ಪಣಿಯಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯು ಭಾರತೀಯ ವೈದ್ಯಕೀಯ ಪರಿಷತ್ತಿನ ನಿಯಮಾವಳಿಗಳನ್ವಯ ಹೊಸ ವೈದ್ಯಕೀಯ ಕಾಲೇಜು ಸ್ಥಾಪನೆಗೆ 20-25 ಎಕರೆಗಳಷ್ಟು ಜಮೀನಿನ ಅವಶ್ಯಕತೆ ಇದ್ದು, ಈಗಾಗಲೇ ಕೊಪ್ಪಳ ನಗರದಲ್ಲಿರುವ ಸರ್ಕಾರಿ ಆಸ್ಪತ್ರೆಯು ಒಟ್ಟು 10-00 ಎಕರೆ ವಿಸ್ತೀರ್ಣವನ್ನು ಹೊಂದಿದ್ದು, ಇನ್ನುಳಿದಂತೆ 15-00 ಎಕರೆ ಜಮೀನಿನ ಅವಶ್ಯಕತೆ ಇದ್ದು, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ 15 ಎಕರೆ 28 ಗುಂಟೆ ಜಮೀನನ್ನು ರೂ. 5,32,26,527/-ಗಳನ್ನು ಪಾವತಿಸಿ ಖರೀದಿಸಲು ನಗರಾಭಿವೃದ್ಧಿ ಇಲಾಖೆಯ ಅನುಮತಿ ಕೋರಿದೆ.

ವೈದ್ಯಕೀಯ ಶಿಕ್ಷಣ ಇಲಾಖೆಯ ಕೋರಿಕೆಯಂತೆ, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಶ್ರೀಮತಿ ಹೆಚ್.ಆರ್. ಸರೋಜಮ್ಮ ಬಡಾವಣೆಯಲ್ಲಿನ ಒಟ್ಟು 24 ಎಕರೆ 28 ಗುಂಟೆ ವಿಸ್ತೀರ್ಣದ ಜಮೀನಿನ ಪೈಕಿ 15 ಎಕರೆ 28 ಗುಂಟೆ ಜಮೀನನ್ನು ರೂ. 5,32,26,527/-ಗಳನ್ನು ಪಾವತಿಸುವ ಷರತ್ತಿಗೊಳಪಟ್ಟು ವೈದ್ಯಕೀಯ ಕಾಲೇಜನ್ನು ಪ್ರಾರಂಭಿಸಲು ವೈದ್ಯಕೀಯ ಶಿಕ್ಷಣ ಇಲಾಖೆಗೆ ಸದರಿ ಜಮೀನನ್ನು ಹಸ್ತಾಂತರಿಸುವ ಬಗ್ಗೆ ಮತ್ತು ಇನ್ನುಳಿದ 9.00 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಆರ್ಥಿಕ ಇಲಾಖೆ ವಿಧಿಸಿದ ಷರತ್ತುಗಳನ್ನು ಪೂರೈಸುವ ನಿಬಂಧನೆಯನ್ನು ವಿಧಿಸಿ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ ವಸತಿ ಬಡಾವಣೆಯನ್ನು ನಿರ್ಮಿಸಲು ಆಡಳಿತಾತ್ಮಕ ಅನುಮೋದನೆ ನೀಡಲು ಸಚಿವ ಸಂಪುಟದ ಅನುಮೋದನೆಯನ್ನು ಕೋರಲಾಗಿ, ದಿನಾಂಕ : 28-01-2014 ರಂದು ನಡೆದ ಸಚಿವ ಸಂಪುಟದ ಸಭೆಯು ಅನುಮೋದನೆ ನೀಡಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 114 ಗುಅಪ್ರಾ 2013, ದಿನಾಂಕ : 11-02-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಶ್ರೀಮತಿ ಹೆಚ್.ಆರ್. ಸರೋಜಮ್ಮ ವಸತಿ ಯೋಜನೆಯ 24 ಎಕರೆ 28 ಗುಂಟೆ ಜಮೀನಿನ ಪೈಕಿ 15 ಎಕರೆ 28 ಗುಂಟೆ ಜಮೀನನ್ನು ಕೊಪ್ಪಳ ನಗರದಲ್ಲಿ ನೂತನ ವೈದ್ಯಕೀಯ ಕಾಲೇಜನ್ನು ಸ್ಥಾಪಿಸಲು ಜಮೀನಿಗೆ ಪರ್ಯಾಯವಾಗಿ ರೂ. 5,32,26,527/- (ಐದು ಕೋಟಿ ಮೂವತ್ತೆರಡು ಲಕ್ಷ ಇಪ್ಪತ್ತಾರು ಸಾವಿರ ಐದು ನೂರಾ ಇಪ್ಪತ್ತೇಳು ರೂಪಾಯಿಗಳು ಮಾತ್ರ) ಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯು ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಪಾವತಿಸುವ ಷರತ್ತಿಗೊಳಪಟ್ಟು ಹಸ್ತಾಂತರಿಸಲು ಸರ್ಕಾರವು ಅನುಮೋದನೆ ನೀಡಿದೆ.

ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯಲ್ಲಿನ ಶ್ರೀಮತಿ ಹೆಚ್.ಆರ್. ಸರೋಜಮ್ಮ ವಸತಿ ಬಡಾವಣೆಯಲ್ಲಿನ ಒಟ್ಟು 24 ಎಕರೆ 28 ಗುಂಟೆ ವಿಸ್ತೀರ್ಣದ ಜಮೀನಿನ ಪೈಕಿ 15 ಎಕರೆ 28 ಗುಂಟೆ ವಿಸ್ತೀರ್ಣ ಜಮೀನನ್ನು ನೂತನ ವೈದ್ಯಕೀಯ ಕಾಲೇಜು ಪ್ರಾರಂಭಿಸಲು ವೈದ್ಯಕೀಯ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಿದ ನಂತರ ಬಾಕಿ ಉಳಿಯುವ 9.00 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 479 ವೆಚ್ಚ-9 2013, ದಿನಾಂಕ : 19-11-2013 ರಲ್ಲಿ ಈ ಕೆಳಕಂಡಂತೆ ವಿಧಿಸಿರುವ ಷರತ್ತುಗಳನ್ವಯ ಕೊಪ್ಪಳ ನಗರಾಭಿವೃದ್ಧಿ ಪ್ರಾಧಿಕಾರದಿಂದ ವಸತಿ ಬಡಾವಣೆಯನ್ನು ನಿರ್ಮಿಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತದೆ.

"Finance Department concurs with the proposal subject to condition that all relevant formalities regarding change in Land use and other town planning requirements are met with-including CA sites in the residential layout planned in 9 acres".

ಸರ್ಕಾರದ ಆದೇಶ ಸಂಖ್ಯೆ : ನಅಇ 50 ಗುಅಪ್ರಾ 2012, ದಿನಾಂಕ : 05-11-2012ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ.

ಈ ಆದೇಶವನ್ನು ದಿನಾಂಕ : 28-01-2014ರಂದು ನಡೆದ ಸಚಿವ ಸಂಪುಟದ ವಿಷಯಸೂಚಿ ಸಂಖ್ಯೆ : ಸಿ/58/2014 ರಲ್ಲಿ ನೀಡಿರುವ ಅನುಮೋದನೆ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**PR. 187**

**SC-50**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಎಸ್. ನಿರಂಜನ, ಅಂದಿನ ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಇವರ ವಿರುದ್ಧ ಶಿಸ್ತು ಕ್ರಮ-ಆದೇಶ ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 265 ಜಿಪಅ 2010, ದಿನಾಂಕ : 04-01-2011,
2. ಮುಖ್ಯ ಇಂಜಿನಿಯರ್, ಕರ್ನಾಟಕ ಲೋಕಾಯುಕ್ತ ಕಛೇರಿ ಇವರ ಪತ್ರ ಸಂಖ್ಯೆ : ಕಂಪ್ಲೆಂಟ್/ ಉಪಲೋಕ್/ ಜಿ.ಎಲ್.ಬಿ./35/2011/ಎ.ಇ.ಇ.-1/957, ದಿನಾಂಕ : 31-07-2013.

**ಪ್ರಸ್ತಾವನೆ :**

ಶ್ರೀ ಎಸ್. ನಿರಂಜನ್, ಕಿರಿಯ ಇಂಜಿನಿಯರ್, (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ರವರು ರಾಯಚೂರಿನ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು ಕಟ್ಟಡ ನಿರ್ಮಾಣ ಕಾಮಗಾರಿಯ ಬಗ್ಗೆ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ದಿನಾಂಕ : 06-04-2010ರಂದು ಸಲ್ಲಿಸಿದ್ದ ಪರಿವೀಕ್ಷಣಾ ವರದಿಯ ಆಧಾರದ ಮೇಲೆ ಸದರಿ ಕಟ್ಟಡ ನಿರ್ಮಾಣದಲ್ಲಿ ನಡೆದಿದೆಯೆನ್ನಲಾದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ವಿವರವಾದ ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 7(2ಎ)ರನ್ವಯ ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತರಿಗೆ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 04-01-2011ರ ಆದೇಶದ ಮೂಲಕ ವಹಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 31-07-2013ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರುರವರು ದಿನಾಂಕ : 30-07-2013ರ ಅನುಸಾರ ಗೌರವಾನ್ವಿತ ಉಪ ಲೋಕಾಯುಕ್ತರ ಕೊಠಡಿಯಲ್ಲಿ ಹಮ್ಮಿಕೊಂಡ ಸಭೆಗೆ ಪೂರ್ವಭಾವಿಯಾಗಿ ಸದರಿ ಕಟ್ಟಡದ ಕುರಿತು ಇತ್ತೀಚಿನ ಹಂತದ ಬಗ್ಗೆ ಸದರಿ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಸದಾಶಿವಪ್ಪ ಇವರನ್ನು ದೂರವಾಣಿ ಮೂಲಕ ಸಂಪರ್ಕಿಸಿ ವಿಚಾರಿಸಿದಾಗ ಕಾಲೇಜಿನ ಮೊದಲನೇ ಮಹಡಿ ಕಟ್ಟಡ ಕಾಮಗಾರಿ ಪೂರ್ಣಗೊಂಡಿರುವುದರ ಜೊತೆಗೆ ಹಾಲಿ ಮೊದಲನೇ ಮಹಡಿಯಲ್ಲಿನ ಕೊಠಡಿಗಳಲ್ಲಿ ಪಠ್ಯವು ಸಹ ನಡೆಯುತ್ತಿರುವುದಾಗಿ ತಿಳಿದು ಬಂದಿದೆ. ಈ ವಿಷಯದ ಜೊತೆಗೆ ಕಾಮಗಾರಿ ನಿರ್ಮಿಸಿರುವ ಕುರಿತು ಹಾಲಿ ಈ ಸಂಬಂಧ ಪಡೆದುಕೊಂಡ ಛಾಯಾಚಿತ್ರಗಳಿಂದ ಉಪ ಕಾರ್ಯದರ್ಶಿಯವರ ವರದಿಗೆ ವ್ಯತಿರಿಕ್ತವಾಗಿ ಹಾಲಿ ಸದರಿ ಕಟ್ಟಡದ ಮೊದಲನೇ ಮಹಡಿಯಲ್ಲಿ ಕಿಟಕಿ ಮತ್ತು ಬಾಗಿಲುಗಳನ್ನು ಅಳವಡಿಸಿರುವುದು ಕಂಡು ಬಂದಿದೆ. ಈ ಅಂಶಗಳನ್ನು ದಿನಾಂಕ : 30-07-2013ರಂದು ಪ್ರಧಾನ ಕಾರ್ಯದರ್ಶಿಯವರ ಗಮನಕ್ಕೂ ತರಲಾಗಿದೆ ಎಂದು ಹಾಗೂ ಪ್ರಸ್ತಾಪಿಸಿರುವ ಕಟ್ಟಡದ ನಿರ್ಮಾಣಕ್ಕೆ (ತನಿಖೆಗೆ ಸಂಬಂಧಿಸಿದಂತೆ) ಸದರಿ ಕಟ್ಟಡದಲ್ಲಿ ಈಗಾಗಲೇ ಪಾಠಪ್ರವಚನಗಳು ನಡೆಯುತ್ತಿರುವುದು ತಿಳಿದುಬಂದಿರುವ ಹಿನ್ನೆಲೆಯಲ್ಲಿ ಈ ಪ್ರಕರಣದ ಕುರಿತು ದಿನಾಂಕ : 4-1-2011 ರಂದು ಹೊರಡಿಸಿರುವ ನಡವಳಿಗಳ ಹಿನ್ನೆಲೆಯಲ್ಲಿ ಲೋಕಾಯುಕ್ತ ಸಂಸ್ಥೆಯಿಂದ ಕೈಗೊಳ್ಳಬೇಕಾದ ಕ್ರಮದ ಕುರಿತು ಸ್ಪಷ್ಟ ಹಾಗೂ ನಿಖರವಾದ ವಿವರಗಳನ್ನು ತಿಳಿಸುವಂತೆ ಕೋರಿರುತ್ತಾರೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್ ರಾಯಚೂರು ಇವರು ದಿನಾಂಕ : 06-04-2010ರಂದು ಸಲ್ಲಿಸಿದ್ದ ವರದಿಯಲ್ಲಿ ಆ ಸಂದರ್ಭದಲ್ಲಿ ಗೋಡೆಗಳಿಗೆ ಪ್ಲಾಸ್ಟರಿಂಗ್ ಮಾಡಿರುವುದಿಲ್ಲ. ಕಿಟಕಿ ಬಾಗಿಲುಗಳನ್ನು ಜೋಡಿಸಿರುವುದಿಲ್ಲ. ಕೊಠಡಿಗಳ ಬಾಗಿಲುಗಳ ಪಕ್ಕದಲ್ಲಿ ಚೌಕಟ್ಟು (Frames) ಗಳನ್ನು ನಿಲ್ಲಿಸಿದ್ದು, ಅವುಗಳನ್ನೂ ಜೋಡಿಸಿರುವುದಿಲ್ಲ. ಕಿಟಕಿ ಮತ್ತು ಬಾಗಿಲುಗಳ ಅಳವಡಿಕೆಯ ಕಾಮಗಾರಿಯನ್ನು ಪೂರ್ಣಗೊಳಿಸದೆ ಕಾಮಗಾರಿ ಪೂರ್ಣಗೊಂಡಿರುವುದಾಗಿ ದಾಖಲೆಗಳಲ್ಲಿ ನಮೂದಿಸಿ ತತ್ಸಂಬಂಧಿಸಿದ ಅನುದಾನವನ್ನು ಪಾವತಿ ಮಾಡಿರುವುದು ದೃಢಪಟ್ಟಿರುತ್ತದೆ ಎಂದು ವರದಿ ನೀಡಿದ್ದರು. ಈ ವರದಿ ಸ್ವೀಕೃತಗೊಂಡ 3 ವರ್ಷಗಳ ನಂತರ ಸದರಿ ಕಟ್ಟಡದಲ್ಲಿ ಕಿಟಕಿ ಬಾಗಿಲುಗಳನ್ನು ಅಳವಡಿಸಿ ಪಾಠಪ್ರವಚನಗಳು ನಡೆಯುತ್ತಿರುವುದಾಗಿ ಪ್ರಾಂಶುಪಾಲರು ತಿಳಿಸಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ರಾಯಚೂರು ಇವರು ಶ್ರೀ ನಿರಂಜನ್ ಇವರಿಗೆ ದಿನಾಂಕ :07-01-2011ರಂದು ತಿಳಿವಳಿಕೆ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ (ಅನುಬಂಧ-1 ರಿಂದ 4) ಯನ್ನು ಜಾರಿಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ರಾಯಚೂರು ಇವರಿಗೆ ಶ್ರೀ ಎಸ್. ನಿರಂಜನ, ಅಂದಿನ ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ರಾಯಚೂರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಂದುವರೆಸುವಂತೆ ನಿರ್ದೇಶನ ನೀಡಲು ಹಾಗೂ ಮಾನ್ಯ ಉಪ ಲೋಕಾಯುಕ್ತರಿಗೆ ತನಿಖೆ ನಡೆಸಲು ಆದೇಶಿಸಿರುವುದನ್ನು ಹಿಂಪಡೆಯಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 265 ಜಿಪಅ 2010, ಬೆಂಗಳೂರು, ದಿನಾಂಕ : 19-11-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 265 ಜಿಪಅ 2010, ದಿನಾಂಕ : 04-01-2011ರಲ್ಲಿ ಶ್ರೀ ಎಸ್. ನಿರಂಜನ್, ಹಿಂದಿನ ಕಿರಿಯ ಇಂಜಿನಿಯರ್, (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರು ರಾಯಚೂರಿನ ಸರ್ಕಾರಿ ಬಾಲಕಿಯರ ಪದವಿ ಪೂರ್ವ ಕಾಲೇಜು ಕಟ್ಟಡ ನಿರ್ಮಾಣ ಕಾಮಗಾರಿಯಲ್ಲಿ ಎಸೆಗಿದ್ದ ಅವ್ಯವಹಾರಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 7(2ಎ) ರನ್ವಯ ವಿವರವಾದ ತನಿಖೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತರಿಗೆ ವಹಿಸಿರುವ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಮುಂದುವರೆದು, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ಶ್ರೀ ಎಸ್. ನಿರಂಜನ್, ಹಿಂದಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಯಚೂರು ಇವರಿಗೆ ದಿನಾಂಕ : 7–1–2011ರಂದು ತಿಳುವಳಿಕೆ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ (ಅನುಬಂಧ–1 ರಿಂದ 4) ಯನ್ನು ಜಾರಿಗೊಳಿಸಿರುವುದರಿಂದ ಅವರ ವಿರುದ್ಧದ ಇಲಾಖಾ–ವಿಚಾರಣೆಯನ್ನು ಮುಂದುವರೆಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

PR. 188

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಗ್ರಾಅಪ 25 ಇಎನ್‌ಕ್ಯೂ 2013, ಬೆಂಗಳೂರು, ದಿನಾಂಕ : 19–11–2013.**

ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 25 ಇಎನ್‌ಕ್ಯೂ 2013, ದಿನಾಂಕ : 10–10–2013ರ ಆದೇಶದ ಭಾಗದ ಎರಡು ಮತ್ತು ಮೂರನೇ ಸಾಲಿನಲ್ಲಿನ **"ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14–ಎರ ಪ್ರಕಾರ" ಎಂಬುದರ ಬದಲಾಗಿ "ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214(2)(b)(i) ರನ್ವಯ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

PR. 189

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೊಡ್ಡಬಳ್ಳಾಪುರ ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** ಸಹಾಯಕ ನಿಬಂಧಕರು, ಲೀಗಲ್ ಓಪಿನಿಯನ್–2, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಂಪ್ಲೆಂಟ್/ಉಪಲೋಕ್/ಬಿಡಿ–101/2006/ಎಆರ್‌ಎಲ್‌ಓ–2, ದಿನಾಂಕ : 22–10–2013.

**ಪ್ರಸ್ತಾವನೆ :**

ಸಹಾಯಕ ನಿಬಂಧಕರು ಲೀಗಲ್ ಓಪಿನಿಯನ್–2, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ : 22–10–2013ರ ಪತ್ರದಲ್ಲಿ ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೊಡ್ಡಬಳ್ಳಾಪುರ ಇವರ ವಿರುದ್ಧ ಕರ್ನಾಟಕ ಉಪ ಲೋಕಾಯುಕ್ತ ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3)ರನ್ವಯ ನೀಡಿರುವ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸುತ್ತಾ, ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸಿನಂತೆ ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ–12 (4)ರನ್ವಯ ಲೋಕಾಯುಕ್ತ ಸಂಸ್ಥೆಗೆ ಮೂರು ತಿಂಗಳೊಳಗಾಗಿ ವರದಿ ಮಾಡಬೇಕೆಂದು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತ–2 ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರಡಿಯಲ್ಲಿ ಸಲ್ಲಿಸಿರುವ ದಿನಾಂಕ : 10–10–2013 ಸಂಖ್ಯೆ : Compt/Uplok/BD-101/2006/ARLO-2 ರ ವರದಿಯಲ್ಲಿ ಶ್ರೀ ಎಸ್. ನರಸಿಂಹಯ್ಯ, ಸೋಲದೇವನಹಳ್ಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೊಡ್ಡಬಳ್ಳಾಪುರ ರವರು 2005–06ನೇ ಸಾಲಿನಲ್ಲಿ ಸುವರ್ಣ ಗ್ರಾಮ ರೋಜಗಾರ್ ಯೋಜನೆಯಡಿ 5–6 ವರ್ಷಗಳ ಹಿಂದೆ ಕೈಗೊಳ್ಳಲಾಗಿದ್ದ ಕಾಮಗಾರಿಗೆ ಖೊಟ್ಟಿ ಬಿಲ್ಲುಗಳನ್ನು ತಯಾರಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುತ್ತಾರೆಂದು ನೀಡಿದ್ದ ದೂರಿನ ಮೇರೆಗೆ ದಾಖಲೆಗಳನ್ನು ಪರಿಶೀಲಿಸಿದಾಗ ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್ ಇವರು ಹಣ ದುರುಪಯೋಗಪಡಿಸಿ ಕೊಂಡಿರುವುದಲ್ಲದೆ, ಕ.ನಾ.ಸೇ (ನಡತೆ) ನಿಯಮಗಳು 1966ರ ನಿಯಮ 3(1)ನ್ನು ಉಲ್ಲಂಘಿಸಿ ಕರ್ತವ್ಯಲೋಪವೆಸಗಿರುವುದು ಕಂಡು ಬಂದಿರುವುದರಿಂದ, ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತ ರವರಿಗೆ ವಹಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತ–2 ರವರು ಶಿಫಾರಸ್ಸು ಮಾಡಿರುವಂತೆ ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೊಡ್ಡಬಳ್ಳಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ,

ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರಡಿಯಲ್ಲಿ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಅದಕ್ಕಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ ರವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 36 ಇಎನ್‌ಕ್ಯೂ 2013, ಬೆಂಗಳೂರು ದಿನಾಂಕ : 14–11–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ರಾಮಕೃಷ್ಣಯ್ಯ, ಕಿರಿಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ದೊಡ್ಡಬಳ್ಳಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತ ರವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಸಿ. ರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

PR. 190

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀಮತಿ ಕಮಲಾಬಾಯಿ ಸಂಗಪ್ಪ ಪವರ್, ಅಧ್ಯಕ್ಷರು, ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ ಹಾಗೂ ಮತ್ತಿತರರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** ಪ್ರಭಾರ ಅಪರ ನಿಬಂಧಕರು, ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಂಪ್ಲೆಂಟ್/ಉಪಲೋಕ್/ಜಿಎಲ್‌ಬಿ–8236/2011/ಎಆರ್‌ಇ–6, ದಿನಾಂಕ : 13–08–2013.

**ಪ್ರಸ್ತಾವನೆ :**

ಪ್ರಭಾರ ಅಪರ ನಿಬಂಧಕರು ವಿಚಾರಣೆಗಳು–6, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ : 13–08–2013ರ ಪತ್ರದಲ್ಲಿ 1) ಶ್ರೀಮತಿ ಕಮಲಾಬಾಯಿ ಸಂಗಪ್ಪ ಪವರ್, ಅಧ್ಯಕ್ಷರು, ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 2) ಶ್ರೀ ಗಣಪತಿ ಗೊರನಾಳೆ, ಹಿಂದಿನ ಕಾರ್ಯದರ್ಶಿ (ಪ್ರಸ್ತುತ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು) ಲಾಖನ್‌ಗಾವ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ 3) ಶ್ರೀ ಸುರೇಶ್ ಕುಮಾರ್ ಕೊಡ್ಡೆ, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 4) ಶ್ರೀ ಮಾನಿಕ್‌ರಾವ್ ಕೆರೂರ್, ಹಿಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ಸಹಾಯಕ ಇಂಜಿನಿಯರ್) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹುಮನಾಬಾದ್, ಬೀದರ್ ಜಿಲ್ಲೆ ಮತ್ತು 5) ಶ್ರೀ ಉಪೇಂದ್ರ, ಲೆಕ್ಕಾಧೀಕ್ಷಕರು, ಹುಮನಾಬಾದ್ ತಾಲ್ಲೂಕು ಪಂಚಾಯತ್, ಬೀದರ್ ಜಿಲ್ಲೆ ಇವರುಗಳ ವಿರುದ್ಧ ಕರ್ನಾಟಕ ಉಪ ಲೋಕಾಯುಕ್ತ–1ರವರು ತನಿಖೆ ನಡೆಸಿ ಲೋಕಾಯುಕ್ತ ಕಾಯ್ದೆ ಕಲಂ 12 (3)ರ ಮೂಲ ತನಿಖಾ ವರದಿಯನ್ನು ಸಂಬಂಧಿಸಿದ ದಾಖಲಾತಿಗಳೊಂದಿಗೆ ಕಳುಹಿಸುತ್ತಾ, ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸಿನಂತೆ ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(4)ರನ್ವಯ ಒಂದು ತಿಂಗಳೊಳಗಾಗಿ ಲೋಕಾಯುಕ್ತ ಸಂಸ್ಥೆಗೆ ವರದಿ ಮಾಡಬೇಕೆಂದು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತ–1 ರವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರಡಿಯಲ್ಲಿ ಸಲ್ಲಿಸಿರುವ ದಿನಾಂಕ : 07–08–2013 ಸಂಖ್ಯೆ : Compt/Uplok/GLB-8236/2011/ARE-6ರ ವರದಿಯಲ್ಲಿ ಫಿರ್ಯಾದುದಾರರಾದ ಶ್ರೀ ಬಾಬುರಾವ್ ಪಾಟೀಲ್, ಬೀದರ್ ಜಿಲ್ಲೆ ಇವರು ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರು ಮನವಿಯಲ್ಲಿ 2009–10ನೇ ಸಾಲಿನಲ್ಲಿ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯಡಿ ಜಾಮುನಗರದಿಂದ ಸೋನಕೇರಾ ಹೋಗುವ ರಸ್ತೆ ಹಾಗೂ ಅಡ್ಡಮೋರಿ ಕಾಮಗಾರಿಯನ್ನು ಅಪೂರ್ಣವಾಗಿ ನಿರ್ಮಿಸಿರುವುದಲ್ಲದೆ ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲು ತದನಂತರದ ಸಾಲಿನಲ್ಲಿ ಅಗತ್ಯವಾದ ಹಣವನ್ನು ಕಾಯ್ದಿರಿಸಲು ವಿಫಲರಾಗಿರುವ ಜೊತೆಗೆ ಈಗಾಗಲೇ ನಿರ್ಮಿಸಿರುವ ಕಾಮಗಾರಿಯು ಸಹ ಕಳಪೆಯಾಗಿ ನಿರ್ಮಿಸಿದ್ದು, ಇದಕ್ಕೆ ಕಾರಣರಾದ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಬೇಕೆಂದು ಕೋರಿದ್ದರ ಮೇರೆಗೆ ತನಿಖೆಯಲ್ಲಿ, 1) ಶ್ರೀಮತಿ ಕಮಲಾಬಾಯಿ ಸಂಗಪ್ಪ ಪವರ್, ಅಧ್ಯಕ್ಷರು, ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 2) ಶ್ರೀ ಗಣಪತಿ ಗೊರನಾಳೆ, ಹಿಂದಿನ ಕಾರ್ಯದರ್ಶಿ (ಪ್ರಸ್ತುತ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು) ಲಾಖನ್‌ಗಾವ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ 3) ಶ್ರೀ ಸುರೇಶ್ ಕುಮಾರ್ ಕೊಡ್ಡೆ, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 4) ಶ್ರೀ ಮಾನಿಕ್‌ರಾವ್ ಕೆರೂರ್, ಹಿಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ಸಹಾಯಕ ಇಂಜಿನಿಯರ್) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹುಮನಾಬಾದ್, ಬೀದರ್ ಜಿಲ್ಲೆ ಮತ್ತು 5) ಶ್ರೀ ಉಪೇಂದ್ರ, ಲೆಕ್ಕಾಧೀಕ್ಷಕರು, ಹುಮನಾಬಾದ್ ತಾಲ್ಲೂಕು ಪಂಚಾಯತ್, ಬೀದರ್ ಜಿಲ್ಲೆ ಇವರುಗಳು ಸರ್ಕಾರದ ರೂ. 2,27,710/–ಗಳನ್ನು ದುರುಪಯೋಗಪಡಿಸಿಕೊಂಡು ಕರ್ತವ್ಯಲೋಪವೆಸಗಿರುವುದು ಕಂಡು ಬಂದಿರುವುದರಿಂದ, ಸದರಿಯವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವಂತೆ ಶ್ರೀಮತಿ ಕಮಲಾಬಾಯಿ ಸಂಗಪ್ಪ ಪವರ್, ಅಧ್ಯಕ್ಷರು, ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, ಇವರ ವಿರುದ್ಧ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದಡಿ ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲಾಗುತ್ತದೆ. ಉಳಿದಂತೆ, 1) ಶ್ರೀ ಗಣಪತಿ ಗೊರನಾಳೆ, ಹಿಂದಿನ ಕಾರ್ಯದರ್ಶಿ (ಪ್ರಸ್ತುತ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು) ಲಾಖನ್‌ಗಾವ್

ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ 2) ಶ್ರೀ ಸುರೇಶ್ ಕುಮಾರ್ ಕೊಡ್ಡೆ, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 3) ಶ್ರೀ ಮಾನಿಕ್‌ರಾವ್ ಕೆರೂರ್, ಹಿಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ಸಹಾಯಕ ಇಂಜಿನಿಯರ್) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹುಮನಾಬಾದ್, ಬೀದರ್ ಜಿಲ್ಲೆ ಮತ್ತು 4) ಶ್ರೀ ಉಪೇಂದ್ರ, ಲೆಕ್ಕಾಧೀಕ್ಷಕರು, ಹುಮನಾಬಾದ್ ತಾಲ್ಲೂಕು ಪಂಚಾಯತ್, ಬೀದರ್ ಜಿಲ್ಲೆ ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರಡಿಯಲ್ಲಿ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಅದಕ್ಕಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ–1 ರವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 21 ಇಎನ್‌ಕ್ಯೂ 2013, ಬೆಂಗಳೂರು ದಿನಾಂಕ : 22–11–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1) ಶ್ರೀ ಗಣಪತಿ ಗೊರನಾಳೆ, ಹಿಂದಿನ ಕಾರ್ಯದರ್ಶಿ (ಪ್ರಸ್ತುತ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು) ಲಾಖನ್‌ಗಾವ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ 2) ಶ್ರೀ ಸುರೇಶ್ ಕುಮಾರ್ ಕೊಡ್ಡೆ, ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು ಘಟಬೋರಲ್ ಗ್ರಾಮ ಪಂಚಾಯತ್, ಹುಮನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, 3) ಶ್ರೀ ಮಾನಿಕ್‌ರಾವ್ ಕೆರೂರ್, ಹಿಂದಿನ ಕಿರಿಯ ಇಂಜಿನಿಯರ್ (ಪ್ರಸ್ತುತ ಸಹಾಯಕ ಇಂಜಿನಿಯರ್) ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಹುಮನಾಬಾದ್, ಬೀದರ್ ಜಿಲ್ಲೆ ಮತ್ತು 4) ಶ್ರೀ ಉಪೇಂದ್ರ, ಲೆಕ್ಕಾಧೀಕ್ಷಕರು, ಹುಮನಾಬಾದ್ ತಾಲ್ಲೂಕು ಪಂಚಾಯತ್, ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(ಎ) ರ ಪ್ರಕಾರ ಜಂಟಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**PR. 191**

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎನ್. ನಿರಂಜನ, ಹಿಂದಿನ ಕಾರ್ಯಪಾಲಕ ಇಂಜಿನಿಯರ್, ನಂ. 1 ಕಟ್ಟಡಗಳ ವಿಭಾಗ, ಬೆಂಗಳೂರು (ಪ್ರಸ್ತುತ C–9, ಬಾಪೂಜಿ ವಿದ್ಯಾನಗರ, ದಾವಣಗೆರೆ) ಇವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :** ಉಪ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಕಂಪ್ಲೆಂಟ್/ಉಪಲೋಕ್/ಬಿಡಿ–384/2007/ಡಿಆರ್‌ಇ–1, ದಿನಾಂಕ : 19–09–2013.

**ಪ್ರಸ್ತಾವನೆ :**

ಉಪ ನಿಬಂಧಕರು ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ : 19–09–2013ರ ಪತ್ರದಲ್ಲಿ ಉಪ ಲೋಕಾಯುಕ್ತರವರು ಶ್ರೀ ಹೆಚ್.ಎನ್. ನಿರಂಜನ, ಹಿಂದಿನ ಕಾರ್ಯಪಾಲಕ ಇಂಜಿನಿಯರ್, ನಂ. 1 ಕಟ್ಟಡಗಳ ವಿಭಾಗ, ಬೆಂಗಳೂರು (ಪ್ರಸ್ತುತ C–9, ಬಾಪೂಜಿ ವಿದ್ಯಾನಗರ, ದಾವಣಗೆರೆ) ಇವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3) ರನ್ವಯ ನೀಡಿರುವ ವರದಿಯನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕಳುಹಿಸುತ್ತಾ, ಉಪ ಲೋಕಾಯುಕ್ತರವರ ಶಿಫಾರಸ್ಸಿನಂತೆ ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ಬಗ್ಗೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(4)ರನ್ವಯ ಲೋಕಾಯುಕ್ತ ಸಂಸ್ಥೆಗೆ ವರದಿ ಮಾಡಬೇಕೆಂದು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರಡಿಯಲ್ಲಿ ಸಲ್ಲಿಸಿರುವ ದಿನಾಂಕ : 17–09–2013 ಸಂಖ್ಯೆ : Compt/Uplok/BD-384/2007/DRE-1 ರ ವರದಿಯಲ್ಲಿ ಫಿರ್ಯಾದುದಾರರಾದ ಶ್ರೀ ಕೆ. ಶಿವರಾಮಪ್ಪ ಸನ್ ಆಫ್ ಹನುಮಂತಪ್ಪ, ಪಲವನಹಳ್ಳಿ, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಇವರು ಶ್ರೀ ಹೆಚ್.ಎನ್. ನಿರಂಜನ, ಕಾರ್ಯಪಾಲಕ ಇಂಜಿನಿಯರ್, ನಂ. 1 ಕಟ್ಟಡಗಳ ವಿಭಾಗ, ಬೆಂಗಳೂರು ಇವರ ವಿರುದ್ಧ ದೂರು ಸಲ್ಲಿಸಿ, ಅವರು ಈ ಹಿಂದೆ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ದಾವಣಗೆರೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಾವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನ ಪಲವನಹಳ್ಳಿ ಗ್ರಾಮೀಣ ನೀರು ಸರಬರಾಜು ಕಾಮಗಾರಿಯ ದುರಸ್ತಿ ಕಾಮಗಾರಿಯನ್ನು ಅಂದಾಜು ಪತ್ರಿಕೆಗೆ ಅನುಗುಣವಾಗಿ ಮಾಡದೆ, ಕಳಪೆಮಟ್ಟದಿಂದ ನಿರ್ವಹಿಸಿರುವುದಾಗಿ ಆಪಾದಿಸಿರುತ್ತಾರೆ. ಈ ಬಗ್ಗೆ TCA, ಕರ್ನಾಟಕ ಲೋಕಾಯುಕ್ತ ರವರು ಕೈಗೊಂಡ ತನಿಖೆ ಕೈಗೊಂಡಿದ್ದು, ತನಿಖಾ ವರದಿಯಲ್ಲಿ ಸದರಿ ಅಧಿಕಾರಿಯು ಕಳಪೆ ಕಾಮಗಾರಿಯನ್ನು ನಿರ್ವಹಿಸಿರುವುದು ಕಂಡು ಬಂದಿರುವುದರಿಂದ, ಸದರಿ ಆಪಾದಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತ ರವರಿಗೆ ವಹಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವಂತೆ ಶ್ರೀ ಹೆಚ್.ಎನ್. ನಿರಂಜನ, ಹಿಂದಿನ ಕಾರ್ಯಪಾಲಕ ಇಂಜಿನಿಯರ್, ನಂ. 1 ಕಟ್ಟಡಗಳ ವಿಭಾಗ, ಬೆಂಗಳೂರು (ಪ್ರಸ್ತುತ C–9, ಬಾಪೂಜಿ ವಿದ್ಯಾನಗರ, ದಾವಣಗೆರೆ) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ)ರಡಿಯಲ್ಲಿ ಶಿಸ್ತು ಕ್ರಮ ಪ್ರಾರಂಭಿಸಲು ಹಾಗೂ ಅದಕ್ಕಾಗಿ ವಿವರವಾದ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಕರ್ನಾಟಕ ಉಪ ಲೋಕಾಯುಕ್ತ ರವರಿಗೆ ವಹಿಸಲು ಸರ್ಕಾರವು ನಿರ್ಧರಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 34 ಇಎನ್‌ಕ್ಯೂ 2013, ಬೆಂಗಳೂರು ದಿನಾಂಕ : 12–11–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಹೆಚ್.ಎನ್. ನಿರಂಜನ, ಹಿಂದಿನ ಕಾರ್ಯಪಾಲಕ ಇಂಜಿನಿಯರ್, ನಂ. 1 ಕಟ್ಟಡಗಳ ವಿಭಾಗ, ಬೆಂಗಳೂರು (ಪ್ರಸ್ತುತ C–9, ಬಾಪೂಜಿ ವಿದ್ಯಾನಗರ, ದಾವಣಗೆರೆ) ಇವರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(ಎ) ರನ್ವಯ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 192**

**ಹೆಚ್.ಸಿ. ರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಡೋಹರ ಕಕ್ಕಯ್ಯ ಜ್ಞಾನ ಪೀಠ, ಭೀಮ ಶಕ್ತಿ ವೃದ್ಧಾಶ್ರಮ ಟ್ರಸ್ಟ್ (ರಿ) ಗೋಕಾಕ್, ಇವರಿಗೆ ಗೋಕಾಕ್ ನಗರದ ಸಿ.ಟಿ.ಎಸ್. ನಂ. 4958ರಲ್ಲಿ 1367.90 ಚ.ಮೀ. ಸರ್ಕಾರಿ ಜಮೀನನ್ನು ಶಾಲಾ ಆಟದ ಮೈದಾನಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ, ಬೆಳಗಾಂ, ಇವರ ಪತ್ರ ಸಂಖ್ಯೆ: ಪ್ರಾಆಬೆ/ಭೂಮಿ/4/ಸಿಟಿಎಸ್/ವಿವ/ 04/ 2011–12 ದಿನಾಂಕ: 13/7/2011.

**ಪ್ರಸ್ತಾವನೆ**

ಮೇಲೆ ಓದಲಾದ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ, ಬೆಳಗಾಂ, ಇವರು ತಮ್ಮ ಪ್ರಸ್ತಾವನೆಯಲ್ಲಿ ಶ್ರೀ ಡೋಹರ ಕಕ್ಕಯ್ಯ ಜ್ಞಾನ ಪೀಠ, ಭೀಮ ಶಕ್ತಿ ವೃದ್ಧಾಶ್ರಮ ಟ್ರಸ್ಟ್ (ರಿ) ಗೋಕಾಕ್, ಇವರಿಗೆ ಜಮೀನು ಮಂಜೂರು ಮಾಡುವ ವಿಷಯಕ್ಕೆ ಸಂಬಂಧಿಸಿದಂತೆ, ಗೋಕಾಕ್ ನಗರದ ಸಿ.ಟಿ.ಎಸ್. ನಂ.4958ರಲ್ಲಿ 1367.90 ಚ.ಮೀ. ಸರ್ಕಾರಿ ಜಾಗವು ಕೊಳಚೆ ಪ್ರದೇಶದಲ್ಲಿದ್ದು, ಸದರಿ ಜಾಗವನ್ನು ಯಾವುದೇ ಉದ್ದೇಶಕ್ಕೆ ಕಾಯ್ದಿರಿಸಿರುವುದಿಲ್ಲವೆಂದು ತಹಶೀಲ್ದಾರ್, ಗೋಕಾಕ್, ಇವರು ತಮ್ಮ ದಿನಾಂಕ:05–06–2007ರ ಪತ್ರದಲ್ಲಿ ವರದಿ ನೀಡಿರುವುದಾಗಿ ಹಾಗೂ ನಗರ ಸಭೆ ಗೋಕಾಕ್, ಇವರು, ದಿನಾಂಕ:28–05–2007ರ ಠರಾವು ಸಂಖ್ಯೆ:64ರಲ್ಲಿ ಸದರಿ ಟ್ರಸ್ಟ್‌ಗೆ ಜಮೀನು ನೀಡಲು ಯಾವುದೇ ಆಕ್ಷೇಪಣೆ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಪ್ರಸ್ತಾಪಿತ ಜಮೀನನನ್ನು ಸಹಾಯಕ ಆಯುಕ್ತರು, ಧಾರ್ಮಿಕದತ್ತಿ ಇಲಾಖೆ, ಬೆಳಗಾಂ, ಇವರಿಂದ ದಿನಾಂಕ: 10–08–2001ರಂದು ಸಾರ್ವಜನಿಕ ಜಿಮ್ಮೆಗಳ ಕಾಯ್ದೆಯನ್ವಯ ಸದರಿ ಸಂಸ್ಥೆಗೆ ನೋಂದಣಿಯಾಗಿರುತ್ತದೆ. ಈ ಸಂಸ್ಥೆಯು ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆಗಳನ್ನು ಶಾಶ್ವತ ಅನುದಾನರಹಿತ ಕರಾರಿನ ಮೇಲೆ ನಡೆಸುತ್ತಿದೆ. ಸದರಿ ಜಮೀನು ಪ್ರಾಪರ್ಟಿ ರಿಜಿಸ್ಟರ್ ಕಾರ್ಡಿನ ಇತರೆ ಹಕ್ಕಿನಲ್ಲಿ ಸಂಖ್ಯೆ:ಸಿ.ಟಿ.ಎಸ್./ಸಿಆರ್/2001 ದಿನಾಂಕ:23–09–1980ರ ಪ್ರಕಾರ ಹರಿಜನರಿಗಾಗಿ ಕಾಯ್ದಿರಿಸಿದ ಜಾಗವೆಂದು ದಾಖಲಾಗಿರುತ್ತದೆ. ಈ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಪ್ರಾದೇಶಿಕ ಆಯುಕ್ತರು, ಬೆಳಗಾಂ ಇವರು ಕೋರಿರುತ್ತಾರೆ.

ನಗರಾಭಿವೃದ್ಧಿ ಇಲಾಖೆಯು ಶ್ರೀ ಡೋಹರ ಕಕ್ಕಯ್ಯ ಜ್ಞಾನಪೀಠ, ಭೀಮ ಶಕ್ತಿ ವೃದ್ಧಾಶ್ರಮ ಟ್ರಸ್ಟ್ (ರಿ) ಗೋಕಾಕ್, ಇವರಿಗೆ ಗೋಕಾಕ್ ನಗರದ ಸಿ.ಟಿ.ಎಸ್. ನಂ.4958ರಲ್ಲಿ 1367.90 ಚ.ಮೀ. ಪ್ರದೇಶವನ್ನು ಮಂಜೂರು ಮಾಡಬಹುದೆಂದು ಅಭಿಪ್ರಾಯ ನೀಡಿರುತ್ತದೆ. ನಗರಾಭಿವೃದ್ಧಿ ಇಲಾಖೆಯ ಆದೇಶ ಸಂಖ್ಯೆ:ನಇ 129 ಟಿಎಂಡಿ 2002 ದಿ:02–06–2003ರಂತೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳಿಂದ ನಿರ್ವಹಿಸಲಾಗುತ್ತಿರುವ ನೋಂದಾಯಿತ ಸಂಘ ಸಂಸ್ಥೆಗಳಿಗೆ ಮಾರುಕಟ್ಟೆ ದರದ ಶೇ.25ರಷ್ಟು ದರ ವಿಧಿಸಿ ಮಂಜೂರು ಮಾಡಲು ಅವಕಾಶವಿರುತ್ತದೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸಚಿವ ಸಂಪುಟ ಸಭೆಯ ದಿನಾಂಕ:16–03–2013ರ ಕಾರ್ಯಸೂಚಿ ಕ್ರಮಸಂಖ್ಯೆ:40 ಮತ್ತು ದಿನಾಂಕ:10–01–2014ರ ಕಾರ್ಯಕ್ರಮ ಸಂಖ್ಯೆ:21ರಲ್ಲಿ ಪ್ರಸ್ತಾಪಿತ ಜಮೀನನ್ನು ಮಂಜೂರು ಮಾಡಲು ಸಚಿವ ಸಂಪುಟವು ನಿರ್ಣಯಿಸಿರುವ ಮೇರೆಗೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 27 ಎಲ್‌ಜಿಎಲ್ 2011 ಬೆಂಗಳೂರು, ದಿನಾಂಕ:31–01–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಬೆಳಗಾಂ ಜಿಲ್ಲೆ, ಗೋಕಾಕ್ ನಗರದ ಸಿ.ಟಿ.ಎಸ್. ನಂ.4958ರಲ್ಲಿ 1367.90 ಚದರ ಮೀಟರ್ ಸರ್ಕಾರಿ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳೂ, 1969ರ ನಿಯಮ 21ರನ್ವಯ ಜಮೀನಿನ ಪ್ರಚಲಿತ ಮಾರುಕಟ್ಟೆ ಬೆಲೆಯ ಶೇ.10ರಷ್ಟು ದರ ಹಾಗೂ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಶ್ರೀ ಡೋಹರ ಕಕ್ಕಯ್ಯ ಜ್ಞಾನಪೀಠ, ಭೀಮ ಶಕ್ತಿ ವೃದ್ಧಾಶ್ರಮ ಟ್ರಸ್ಟ್ (ರಿ) ಗೋಕಾಕ್, ಇವರಿಗೆ ಇವರ ಸಂಸ್ಥೆಯ ಶಾಲಾ ಆಟದ ಮೈದಾನಕ್ಕಾಗಿ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು :–**

(1) ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.

(2) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

(3) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.

(4) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

(5) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

(6) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೇ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

(7) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

(8) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

(9) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

(10) ಮಂಜೂರಾದ ಜಮೀನು 1969ರ ಭೂಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

(11) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಕಡತ ಸಂಖ್ಯೆ:ಆಇ 936 ವೆಚ್ಚ-7/2011 ಆರ್ಥಿಕ ಇಲಾಖೆ (ವೆಚ್ಚ-7) ದಿನಾಂಕ:08/10/2012ರ ಅನುಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಂಜೂರಾತಿ-3)

PR-194
SC-50

## ಕಂದಾಯ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕು ಗಂಜಿಗಟ್ಟಿ ಗ್ರಾಮದ ರಿಸ.ನಂ.59ರಲ್ಲಿ ಕ್ಷೇತ್ರ-2-00 ಎಕರೆ ಜಮೀನನ್ನು ಕುರುಬರ ಸಂಘಕ್ಕೆ ಸಮುದಾಯ ಭವನಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು ಹಾವೇರಿ ಜಿಲ್ಲೆ, ಹಾವೇರಿ ರವರ ಪತ್ರ ದಿನಾಂಕ:11-2-2013.

**ಪ್ರಸ್ತಾವನೆ**

ಜಿಲ್ಲಾಧಿಕಾರಿಗಳು, ಹಾವೇರಿ, ಇವರು ದಿನಾಂಕ:11-2-2013ರ ಪತ್ರದಲ್ಲಿ ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕು ಗಂಜಿಗಟ್ಟಿ ಗ್ರಾಮದ ರಿ.ಸ.ನಂ.59ರಲ್ಲಿ 2-00 ಎಕರೆ ಜಮೀನನ್ನು ಕುರುಬರ ಸಂಘಕ್ಕೆ ಸಮುದಾಯ ಭವನಕ್ಕಾಗಿ ಮಂಜೂರು ಮಾಡುವ ಬಗ್ಗೆ ಕೋರಿರುತ್ತಾರೆ.

ಶಿಗ್ಗಾಂವ ತಾಲ್ಲೂಕು ಗಂಜಿಗಟ್ಟಿ ಗ್ರಾಮದ ರಿ.ಸ.ನಂ.59ರ ಕ್ಷೇತ್ರ 31 ಎಕರೆ 19 ಗುಂಟೆ ನೇದ್ದರ ಪೈಕಿ ಈಗಾಗಲೇ ಈ ಜಮೀನಿನಲ್ಲಿ ಮಾನ್ಯ ಸಿವಿಲ್ ಜಡ್ಜ್ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯದ ಕಟ್ಟಡ ಹಾಗೂ ವಸತಿ ಗೃಹಕ್ಕೆ ಕ್ಷೇತ್ರ 10 ಎಕರೆ ಹಾಗೂ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಗೆ (ಮೊರಾರ್ಜಿ ದೇಸಾಯಿ ವಸತಿ ಶಾಲೆ) ಇವರಿಗೆ 10 ಎಕರೆ, ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ, ಶಿಗ್ಗಾಂವ್ ಇವರಿಗೆ 5-00 ಎಕರೆ ಜಮೀನು ಮಂಜೂರಾಗಿರುತ್ತದೆ. ಉಳಿದ 6 ಎಕರೆ 19 ಗುಂಟೆ ಕ್ಷೇತ್ರ ಸರ್ಕಾರಿ ಮುಫತ್ ಗೈರಾಣ ಇದ್ದು, ಸಾರ್ವಜನಿಕ ಹಿತಾದೃಷ್ಟಿಯಿಂದ ಕುರುಬರ ಸಂಘಕ್ಕೆ ಸಮುದಾಯ ಭವನಕ್ಕಾಗಿ ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕು ಗಂಜಿಗಟ್ಟಿ ಗ್ರಾಮದ ರಿ.ಸ.ನಂ.59 ಕ್ಷೇತ್ರದಲ್ಲಿ 2-00 ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 17 ಎಲ್‌ಜಿಡಿ 2013 ಬೆಂಗಳೂರು ದಿನಾಂಕ:25-01-2014**

ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕು, ಗಂಜಿಗಟ್ಟಿ ಗ್ರಾಮದ ರಿ.ಸ.ನಂ.59ರಲ್ಲಿ 2-00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19 ರನ್ವಯ ಸದರಿ ಜಮೀನಿನ ಮಾರ್ಗಸೂಚಿ ಬೆಲೆಯ ಶೇ.10ರಷ್ಟನ್ನು ವಿಧಿಸಿ, ಪ್ರತಿ ಎರಡು ವರ್ಷಗಳಿಗೊಮ್ಮೆ ಗುತ್ತಿಗೆ ದರವನ್ನು ಶೇ.10ರಷ್ಟನ್ನಾಗಿ ಹೆಚ್ಚಿಸುವ ಹಾಗೂ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಕುರುಬರ ಸಂಘಕ್ಕೆ, 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

1) ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.

2) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

3) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.

4) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

5) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

6) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

7) ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

8) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

9) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಿಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

10) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ವಕ್ಕೆ ತಾನೆ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

11) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಲಕ್ಷ್ಮೀನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಂಜೂರಾತಿ–3)

**PR-195**
**SC-25**

## ತೋಟಗಾರಿಕೆ ಸಚಿವಾಲಯ

**ವಿಷಯ :** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಹುದ್ದೆಯನ್ನು ಐ.ಎ.ಎಸ್. ಸೀನಿಯರ್ ಸ್ಕೇಲ್ ವೇತನ ಶ್ರೇಣಿಗೆ ಕೆಳದರ್ಜೆಗೇರಿಸುವ ಕುರಿತು.

**ಓದಲಾಗಿದೆ :** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸು 640 ಸೇಅಸೆ 2013, ದಿನಾಂಕ: 14–08–2013.

2) ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 862 ಸೇಅಸೆ 2013, ದಿನಾಂಕ: 28–10–2013.

**ಪ್ರಸ್ತಾವನೆ**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ:14–08–2013ರ ಅಧಿಸೂಚನೆಯಲ್ಲಿ ಐ.ಎ.ಎಸ್. ಸೂಪರ್ ಟೈಮ್ ಸ್ಕೇಲ್ ವೇತನ ಶ್ರೇಣಿ ರೂ.37400–67000+ಜಿ.ಪಿ ರೂ. 10000 ಹುದ್ದೆಯಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಹುದ್ದೆಯನ್ನು ಕೆಳದರ್ಜೆಗಿಳಿಸಿ ಐ.ಎ.ಎಸ್. ಸೀನಿಯರ್ ಸ್ಕೇಲ್ ಹಂತದ ಅಧಿಕಾರಿಯಾದ ಶ್ರೀ ಜಿ.ಎಸ್. ಶಿವಸ್ವಾಮಿ ಭಾ.ಆ.ಸೇ., ಇವರನ್ನು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರನ್ನಾಗಿ ನೇಮಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2) ದಿನಾಂಕ 28–10–2013ರ ಅನಧಿಕೃತ ಟಿಪ್ಪಣಿಯಲ್ಲಿ ಐ.ಎ.ಎಸ್. ಸೂಪರ್ ಟೈಮ್ ವೇತನ ಶ್ರೇಣಿಯ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಹುದ್ದೆಯನ್ನು ದಿನಾಂಕ:14–08–2013 ರಿಂದ ಜಾರಿಗೆ ಬರುವಂತೆ ಹಾಗೂ ವೃಂದ ಹುದ್ದೆಯು ಪುನರುಜ್ಜೀವಿತಗೊಳ್ಳುವವರೆಗೆ ಐ.ಎ.ಎಸ್. ಸೀನಿಯರ್ ಸ್ಕೇಲ್ ಹಂತಕ್ಕೆ ಕೆಳದರ್ಜೆಗಿಳಿಸಿ ಆದೇಶ ಹೊರಡಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕೋರಿರುತ್ತದೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 150 ರೇಸೇವಿ 2013, ಬೆಂಗಳೂರು, ದಿನಾಂಕ:16–11–2013**

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಐ.ಎ.ಎಸ್. ಸೂಪರ್ ಟೈಮ್ ವೇತನ ಶ್ರೇಣಿಯ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಹುದ್ದೆಯನ್ನು ದಿನಾಂಕ 14–08–2013 ರಿಂದ ಜಾರಿಗೆ ಬರುವಂತೆ ಹಾಗೂ ವೃಂದ ಹುದ್ದೆಯು ಪುನರುಜ್ಜೀವಿತಗೊಳ್ಳುವವರೆಗೆ ಐ.ಎ.ಎಸ್. ಸೀನಿಯರ್ ಸ್ಕೇಲ್ ಹಂತಕ್ಕೆ ಕೆಳದರ್ಜೆಗಿಳಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಬಿ. ವಿಜಯಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ತೋಟಗಾರಿಕೆ ಇಲಾಖೆ (ರೇಷ್ಮೆ)

**PR-200**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಹಿಂದಿನ ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ. ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಂದಗೋಳ, ಧಾರವಾಡ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಎಲ್–29/ಸಿಆರ್–10/2009. ಬಿಜಿಎಂ, ದಿನಾಂಕ : 21–07–2009.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 216 ಎಂಎಸ್‌ಎ 2009, ದಿನಾಂಕ : 31–08–2009.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 216 ಎಂಎಸ್‌ಎ 2009, ದಿನಾಂಕ : 05–08–2010.
4. ಸರ್ಕಾರದ ಆದೇಶ ಸಂಖ್ಯೆ : ಆಕುಕ 216 ಎಂಎಸ್‌ಎ 2009, ದಿನಾಂಕ : 30–12–2010.
5. ಸರ್ಕಾರದ ಆದೇಶ ಸಂಖ್ಯೆ : ಆಕುಕ 216 ಎಂಎಸ್‌ಎ 2009, ದಿನಾಂಕ : 21–11–2011.
6. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–29/ಸಿಆರ್–10/2009.ಬಿಜಿಎಂ, ದಿನಾಂಕ: 05–08–2013.
7. ಬೆಳಗಾವಿಯ 4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮತ್ತು ವಿಶೇಷ ನ್ಯಾಯಾಧೀಶರ (ಪಿ.ಸಿ.ಎ) ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ದಿನಾಂಕ: 26–03–2013ರ ತೀರ್ಪು.
8. ಸರ್ಕಾರದ ಪತ್ರ ಸಂಖ್ಯೆ : ಆಕುಕ 216 ಎಂಎಸ್‌ಎ 2009, ದಿನಾಂಕ: 29–08–2013.
9. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 216 ಎಂಎಸ್‌ಎ 2009, ದಿನಾಂಕ: 29–08–2013.
10. ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಇವರ ರಕ್ಷಣಾ ಹೇಳಿಕೆ ದಿನಾಂಕ: 16–09–2013.
11. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ : ಪಿ.ಎಸ್.ಸಿ/128/ಸಿಎನ್‌ಎಸ್/2013, ದಿನಾಂಕ: 29–10–2013.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ. ಇವರು ಶ್ರೀ ಬಸವಂತ ಯಲ್ಲಪ್ಪಾ ಬೇಟಗಾರ, ನಾಯಿತೇಗೂರ ಗ್ರಾಮ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ. ಇವರ ಸೊಸೆ ಶ್ರೀಮತಿ ಲಕ್ಷ್ಮೀ ಎಂಬುವವರು ಹೆರಿಗೆ ಸಲುವಾಗಿ ಆಸ್ಪತ್ರೆಗೆ ದಾಖಲಾಗಿದ್ದು, ಸದರಿಯವರು ಚಿಕಿತ್ಸೆ ನೀಡಲು ಲಂಚದ ಹಣಕ್ಕೆ ಒತ್ತಾಯಿಸಿ ದಿನಾಂಕ: 03–07–2009ರಂದು 2,500/– ರೂಪಾಯಿ ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿದ್ದು, ಸದರಿಯವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಬೆಳಗಾವಿ ಪೊಲೀಸ್ ಠಾಣಾ ಮೊ.ನಂ. 10/2009 ಕಲಂ 7.13(1)(ಡಿ) ಸಹಕಲಂ 13(2) ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ರೀತ್ಯಾ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವೈದ್ಯಾಧಿಕಾರಿಯನ್ನು ಅಮಾನತ್ತು ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಇವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಸಾರ್ವಜನಿಕ ಆಸ್ಪತ್ರೆ, ಕುಂದಗೋಳ, ಧಾರವಾಡ ಜಿಲ್ಲೆ ಇಲ್ಲಿಗೆ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರಿಕ ಸೇವಾ ನಿಯಮಗಳು, 1957ರ ನಿಯಮ 14(ಎ)ರಡಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (6)ರಲ್ಲಿ ಓದಲಾದ ಪತ್ರದಲ್ಲಿ, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಬೆಳಗಾವಿಯ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಲಯವು ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ದಿನಾಂಕ: 27–03–2013ರಂದು ಶಿಕ್ಷೆ ವಿಧಿಸಿರುವುದರಿಂದ ಸದರಿಯವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವಂತೆ ಕೋರಿರುತ್ತಾರೆ

ಮೇಲೆ ಕ್ರಮಸಂಖ್ಯೆ (7)ರಲ್ಲಿ ಓದಲಾದ ತೀರ್ಪಿನಲ್ಲಿ ಬೆಳಗಾವಿಯ 4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮತ್ತು ವಿಶೇಷ ನ್ಯಾಯಾಧೀಶರ (ಪಿ.ಸಿ.ಎ) ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ದಿನಾಂಕ: 26–03–2013ರಂದು ತೀರ್ಪು ನೀಡಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರಿಗೆ ಈ ಕೆಳಕಂಡಂತೆ ಶಿಕ್ಷೆ ವಿಧಿಸಿ ಆದೇಶಿಸಿದೆ.

"The accused is found guilty of the offences punishable U/s 7 and 13(1) (d) r/w section 13(2) of Prevention of Corruption Act, 1988 and he is convicted U/s 235/(2) of Cr.P.C.

The accused is sentenced to undergo rigorous imprisonment for a period of one year and to pay fine of Rs.5000/-, in default simple imprisonment for a further period of three months for the offence punishable U/s 7 of Prevention of Corruption Act, 1988.

The accused is further sentenced to undergo rigorous imprisonment for a period of two years and to pay fine of Rs.10,000/-, in default simple imprisonment for a further period of six months for the offence punishable U/s 13(1) (d) r/w sec., 13(2) of the Prevention of Corruption Act, 1988.

Both the sentences shall run concurrently.

ಮೇಲೆ ಕ್ರಮಸಂಖ್ಯೆ (8)ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಕರ್ನಾಟಕ ಲೋಕಾಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

ಮೇಲೆ ಕ್ರಮಸಂಖ್ಯೆ (9)ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಬೆಳಗಾವಿಯ 4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮತ್ತು ವಿಶೇಷ ನ್ಯಾಯಾಧೀಶರ (ಪಿ.ಸಿ.ಎ) ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ದಿನಾಂಕ: 26–03–2013ರಂದು ನೀಡಿರುವ ತೀರ್ಪಿನ ಪ್ರತಿಯನ್ನು ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು ಅವರಿಗೆ ಜಾರಿ ಮಾಡಿ ರಕ್ಷಣಾ ಹೇಳಿಕೆಯನ್ನು ಕೋರಲಾಗಿತ್ತು.

ಮೇಲೆ ಕ್ರಮಸಂಖ್ಯೆ (10)ರಲ್ಲಿ ಓದಲಾದ ರಕ್ಷಣಾ ಹೇಳಿಕೆಯಲ್ಲಿ ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಹಿರಿಯ ತಜ್ಞರು ಇವರು ಬೆಳಗಾವಿಯ 4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮತ್ತು ವಿಶೇಷ ನ್ಯಾಯಾಧೀಶರ (ಪಿ.ಸಿ.ಎ) ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ನೀಡಿರುವ ತೀರ್ಪಿನ ವಿರುದ್ಧ ಗೌ॥ ರಾಜ್ಯ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ, ಧಾರವಾಡ ಇಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ: 2600/2013ನ್ನು ದಾಖಲಿಸಿ, ಜಾಮೀನು ಪಡೆದಿರುವುದಾಗಿ ತಿಳಿಸಿರುತ್ತಾರೆ.

ಗೌ॥ ಸರ್ವೋಚ್ಛ ನ್ಯಾಯಾಲಯವು ಕಾಲೇಜು ಶಿಕ್ಷಣ ಉಪನಿರ್ದೇಶಕರು (ಆಡಳಿತ) ಮದ್ರಾಸ್ ವಿರುದ್ಧ ಎಸ್. ನಾಗೂರ ಮೀರ ಪ್ರಕರಣದಲ್ಲಿ (ಎಐಆರ್ 1995 ಎಸ್‌ಸಿ 1364) ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ದಂಡನಾದೇಶವನ್ನು ನಿಲಂಬನೆಯಲ್ಲಿದ್ದರೆ ಅಥವಾ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಶಿಸ್ತುಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿರುವುದಿಲ್ಲ ಎಂದು ಆದೇಶಿಸಲಾಗಿದೆ. ಇಂತಹ ಪ್ರಕರಣಗಳಲ್ಲಿ ಯಾವ ರೀತಿ ಕ್ರಮವಹಿಸಬೇಕೆಂಬ ಬಗ್ಗೆ ಸಿ.ಆ.ಸು. ಇಲಾಖೆಯು ಸುತ್ತೋಲೆ (ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ: 26–06–1996) ಹೊರಡಿಸಿದ್ದು. ಈ ಕೆಳಕಂಡಂತೆ ಸೂಚನೆ ನೀಡಿದೆ.

"ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ ಎರಡನೇ ಪರಂತುಕದ ಖಂಡ(ಎ)ಯು 'ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ. ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನದಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ' ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1)ರನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (acquit) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ."

ಮೇಲೆ ಕ್ರಮಸಂಖ್ಯೆ (11)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಹಿರಿಯ ತಜ್ಞರು ಅವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿರುತ್ತದೆ.

ಬೆಳಗಾವಿಯ 4ನೇ ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮತ್ತು ವಿಶೇಷ ನ್ಯಾಯಾಧೀಶರ (ಪಿ.ಸಿ.ಎ) ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 37/2011ರಲ್ಲಿ ದಿನಾಂಕ: 26–03–2013ರಂದು ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಕಾರಾಗೃಹ ವಾಸ ಮತ್ತು ದಂಡ ವಿಧಿಸಿದ್ದು, ಸದರಿ ತೀರ್ಪಿನ ವಿರುದ್ಧ ಆರೋಪಿತ ಸರ್ಕಾರಿ ಅಧಿಕಾರಿಯವರು ಗೌ॥ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ, ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ 2600/2013ರಲ್ಲಿ ಸಲ್ಲಿಸಿರುವ ಮೇಲ್ಮನವಿಯಲ್ಲಿ ಗೌ॥ ಉಚ್ಛ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು, ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಹಿಂದಿನ ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ. ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಂದಗೋಳ, ಧಾರವಾಡ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 216 ಎಂಎಸ್‌ಎ 2009, ಬೆಂಗಳೂರು, ದಿನಾಂಕ : 04-02-2014.**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಗೌ॥ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ, ಇಲ್ಲಿನ ಕ್ರಿಮಿನಲ್ ಅಪೀಲ್ ಸಂಖ್ಯೆ : 2600/2013ರಲ್ಲಿ ಗೌ॥ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು, ಡಾ॥ ಯೋಗೇಂದ್ರನಾಥ ಪರಪ್ಪಾ ಅಣ್ಣಿಗೇರಿ, ಹಿಂದಿನ ಮುಖ್ಯ ವೈದ್ಯಾಧಿಕಾರಿಗಳು, ಸಮುದಾಯ ಆರೋಗ್ಯ ಕೇಂದ್ರ, ಕಿತ್ತೂರು, ಬೆಳಗಾವಿ ಜಿಲ್ಲೆ. ಪ್ರಸ್ತುತ ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ, ಕುಂದಗೋಳ, ಧಾರವಾಡ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ.ರಾಮಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು 2&3),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 196**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಕೆ.ರಾಜಶೇಖರ್, ಹಿಂದಿನ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಪ್ರಸ್ತುತ ಪ್ರಾಥಮಿಕ ಆರೋಗ್ಯ ಕೇಂದ್ರ, ಚೋರನೂರು, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ಸಿಟಿಎಲ್–21/ಸಿಆರ್–4/2008.ಹೊಸಪೇಟೆ, ದಿನಾಂಕ: 06–08–2008.
2. ಸರ್ಕಾರದ ಆದೇಶ ಸಂಖ್ಯೆ : ಆಕುಕ 356 ಎಂಎಸ್‌ಎ 2008, ದಿನಾಂಕ : 06–09–2008.
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 356 ಎಂಎಸ್‌ಎ 2008, ದಿನಾಂಕ : 03–09–2009.
4. ಸರ್ಕಾರದ ಆದೇಶ ಸಂಖ್ಯೆ : ಆಕುಕ 356 ಎಂಎಸ್‌ಎ 2008, ದಿನಾಂಕ : 23–09–2009.
5. ಸರ್ಕಾರದ ಆದೇಶ ಸಂಖ್ಯೆ : ಆಕುಕ 100 ಎಂಎಸ್‌ಎ 2012, ದಿನಾಂಕ : 03–05–2012.
6. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಸಿಟಿಎಲ್–21/ಸಿಆರ್–4/2008.ಹೊಸಪೇಟೆ, ದಿನಾಂಕ:30–04–2013.
7. ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23–03–2013ರ ತೀರ್ಪು.
8. ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 356 ಎಂಎಸ್‌ಎ 2008, ದಿನಾಂಕ: 01–08–2013.
9. ಡಾ॥ ಕೆ.ರಾಜಶೇಖರ್, ಇವರ ರಕ್ಷಣಾ ಹೇಳಿಕೆ ದಿನಾಂಕ: 19–08–2013.
10. ಸರ್ಕಾರದ ಪತ್ರ ಸಂಖ್ಯೆ : ಆಕುಕ 356 ಎಂಎಸ್‌ಎ 2008, ದಿನಾಂಕ: 31–08–2013.
11. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ : ಪಿ.ಎಸ್.ಸಿ/131/ಸಿಎನ್‌ಎಸ್/2013, ದಿನಾಂಕ: 02–12–2013.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರು ಶ್ರೀ ವಿ.ಎನ್.ಜೋಷಿ, ಕ್ಷೇತ್ರ ಆರೋಗ್ಯ ಶಿಕ್ಷಣಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, (ಓ.ಓ.ಡಿ ಶಿಡಗಿನಮೊಳ), ಬಳ್ಳಾರಿ ಜಿಲ್ಲೆ. ಇವರ ಒಂದು ಹೆಚ್ಚುವರಿ ವೇತನ ಬಡ್ತಿಯ ಅರಿಯರ್ಸ್ ಬಿಲ್ ಮಾಡಿಕೊಡಲು 15,000/–ರೂಪಾಯಿ ಲಂಚದ ಹಣಕ್ಕೆ ಒತ್ತಾಯಿಸಿ ದಿನಾಂಕ: 23–07–2009ರಂದು ಹಣ ಪಡೆಯುತ್ತಿದ್ದಾಗ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿದ್ದು, ಸದರಿಯವರ ವಿರುದ್ಧ ಕರ್ನಾಟಕ ಲೋಕಾಯುಕ್ತ ಹೊಸಪೇಟೆ ಪೊಲೀಸ್ ಠಾಣೆಯಲ್ಲಿ ಮೊ.ನಂ. 04/2008, ಕಲಂ 7.13(1)(ಡಿ) ಸಹಕಲಂ 13(2) ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ರೀತ್ಯಾ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ವೈದ್ಯಾಧಿಕಾರಿಯನ್ನು ಅಮಾನತ್ತು ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ, ಸರ್ಕಾರಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಇವರ ವಿರುದ್ಧ ಶಿಸ್ತುಕ್ರಮ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಪ್ರಾಥಮಿಕ ಆರೋಗ್ಯ ಕೇಂದ್ರ, ಚೋರನೂರು, ಸಂಡೂರು ತಾಲ್ಲೂಕು, ಇಲ್ಲಿಗೆ ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರಿಕ ಸೇವಾ ನಿಯಮಗಳು, 1957ರ ನಿಯಮ 14(ಎ)ರಡಿ ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ (6)ರಲ್ಲಿ ಓದಲಾದ ಪತ್ರದಲ್ಲಿ, ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23-03-2013ರಂದು ಶಿಕ್ಷೆ ವಿಧಿಸಿರುವುದರಿಂದ ಸದರಿಯವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವಂತೆ ಕೋರಿರುತ್ತಾರೆ

ಮೇಲೆ ಕ್ರಮಸಂಖ್ಯೆ (7)ರಲ್ಲಿ ಓದಲಾದ ತೀರ್ಪಿನಲ್ಲಿ ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ಸತ್ರ ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23-03-2013ರಂದು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರಿಗೆ ಈ ಕೆಳಕಂಡಂತೆ ಶಿಕ್ಷೆ ವಿಧಿಸಿ ಆದೇಶಿಸಿದೆ.

" Accused is sentenced (1) for the offence under section 7 R/w sec. 13(2) of P.C. Act, R.I for 2 years and a fine of Rs.10,000/-, in default of payment of fine, he has to undergo S.I. for 3 months.

2) for the offence under section 13(1) (d) R/w sec. 13(2) of P.C. Act, R.I for 3years and a fine of Rs.10,000/-, in default of payment of fine, he has to undergo S.I. for three months.

Substantive portion of the sentence shall run concurrently.

ಮೇಲೆ ಕ್ರಮಸಂಖ್ಯೆ (8)ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ಸೂಚನಾ ಪತ್ರದೊಂದಿಗೆ ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23-03-2013ರಂದು ನೀಡಿರುವ ತೀರ್ಪಿನ ಪ್ರತಿಯನ್ನು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಅವರಿಗೆ ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆಯನ್ನು ಕೋರಲಾಗಿತ್ತು.

ಮೇಲೆ ಕ್ರಮಸಂಖ್ಯೆ (9)ರಲ್ಲಿ ಓದಲಾದ ರಕ್ಷಣಾ ಹೇಳಿಕೆಯಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು ಇವರು ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23-03-2013ರಂದು ನೀಡಿರುವ ತೀರ್ಪಿನ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದ ಸಂಚಾರಿ ಪೀಠ, ಧಾರವಾಡ. ಇಲ್ಲಿ ಕ್ರಿಮಿನಲ್ ಅಪೀಲ್ ಸಂಖ್ಯೆ: 2595/2013ನ್ನು ದಾಖಲಿಸಿ, ಜಾಮೀನು ಪಡೆದಿದ್ದು ತಮ್ಮ ಮೇಲೆ ಯಾವುದೇ ಶಿಸ್ತು ಕ್ರಮ ಜರುಗಿಸಬಾರದೆಂದು ಕೋರಿರುತ್ತಾರೆ.

ಗೌ॥ ಸರ್ವೋಚ್ಚ ನ್ಯಾಯಾಲಯವು ಕಾಲೇಜು ಶಿಕ್ಷಣ ಉಪನಿರ್ದೇಶಕರು (ಆಡಳಿತ) ಮದ್ರಾಸ್ ವಿರುದ್ಧ ಎಸ್. ನಾಗೂರ ಮೀರ ಪ್ರಕರಣದಲ್ಲಿ (ಎಐಆರ್ 1995 ಎಸ್‌ಸಿ 1364) ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ದಂಡನಾದೇಶವನ್ನು ನಿಲಂಬನೆಯಲ್ಲಿದ್ದರೆ ಅಥವಾ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾರೆ ಎಂಬ ಕಾರಣಕ್ಕಾಗಿ ಶಿಸ್ತುಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿರುವುದಿಲ್ಲ ಎಂದು ಆದೇಶಿಸಲಾಗಿದೆ. ಇಂತಹ ಪ್ರಕರಣಗಳಲ್ಲಿ ಯಾವ ರೀತಿ ಕ್ರಮವಹಿಸಬೇಕೆಂಬ ಬಗ್ಗೆ ಸಿ.ಆ.ಸು. ಇಲಾಖೆಯು ಸುತ್ತೋಲೆ (ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ: 26-06-1996) ಹೊರಡಿಸಿದ್ದು. ಈ ಕೆಳಕಂಡಂತೆ ಸೂಚನೆ ನೀಡಿದೆ.

"ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ ಎರಡನೇ ಪರಂತುಕದ ಖಂಡ(ಎ)ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ಧಿಯಾಗಿರುವುದನ್ನು ನಿಲಂಬನದಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರೆ ವ್ಯವಹರಣೆ ಹೂಡಿದ್ದಾನೆ. ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನದಲ್ಲಿಟ್ಟಿದೆ ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14(1)ರನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (acquit) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ."

ಮೇಲೆ ಕ್ರಮಸಂಖ್ಯೆ (10)ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು.

ಮೇಲೆ ಕ್ರಮಸಂಖ್ಯೆ (11)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಅವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿರುತ್ತದೆ.

ಬಳ್ಳಾರಿಯ ಪ್ರಧಾನ ಸತ್ರ (ವಿಶೇಷ) ನ್ಯಾಯಾಧೀಶರ ನ್ಯಾಯಾಲಯದ ವಿಶೇಷ ಪ್ರಕರಣ ಸಂಖ್ಯೆ: 22/2010ರಲ್ಲಿ ದಿನಾಂಕ: 23-03-2013 ರಂದು ಡಾ॥ ಕೆ.ರಾಜಶೇಖರ್, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರಿಗೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಕಾರಾಗೃಹ ವಾಸ ಮತ್ತು ದಂಡ ವಿಧಿಸಿದ್ದು, ಸದರಿ ತೀರ್ಪಿನ ವಿರುದ್ಧ ಆರೋಪಿತ ಸರ್ಕಾರಿ ಅಧಿಕಾರಿಯವರು ಗೌ॥ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ, ಇಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ 2595/2013ರಲ್ಲಿ ಸಲ್ಲಿಸಿರುವ ಮೇಲ್ಮನವಿಯಲ್ಲಿ ಗೌ॥ ಉಚ್ಚ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು, ಡಾ॥ ಕೆ.ರಾಜಶೇಖರ್, ಹಿಂದಿನ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಪ್ರಸ್ತುತ ಪ್ರಾಥಮಿಕ ಆರೋಗ್ಯ ಕೇಂದ್ರ, ಚೋರನೂರು, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ವಜಾಗೊಳಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 356 ಎಂಎಸ್ಎ 2008, ಬೆಂಗಳೂರು, ದಿನಾಂಕ : 04-02-2014.**

ಸರ್ಕಾರವು ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಗೌ॥ ಉಚ್ಚ ನ್ಯಾಯಾಲಯ, ಸಂಚಾರಿ ಪೀಠ, ಧಾರವಾಡ, ಇಲ್ಲಿನ ಕ್ರಿಮಿನಲ್ ಅಪೀಲು ಸಂಖ್ಯೆ : 2595/2013ರಲ್ಲಿ ಗೌ॥ ನ್ಯಾಯಾಲಯವು ನೀಡುವ ಅಂತಿಮ ತೀರ್ಪಿನ ಷರತ್ತಿಗೊಳಪಟ್ಟು, ಡಾ॥ ಕೆ.ರಾಜಶೇಖರ್, ಹಿಂದಿನ ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ತಂಬ್ರಳ್ಳಿ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಪ್ರಸ್ತುತ ಪ್ರಾಥಮಿಕ ಆರೋಗ್ಯ ಕೇಂದ್ರ, ಚೋರನೂರು, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ವಿ.ರಾಮಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-3),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 197**

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 01 ಪಿಪಿಇ 2013, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ, 2014**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 01 ಪಿಪಿಇ 2014, ದಿನಾಂಕ: 18-01-2014ರ ಪ್ರಸ್ತಾವನೆಯ ಮೊದಲನೇ ಸಾಲಿನಲ್ಲಿ **"ಸಹಾಯಕ ನಿಬಂಧಕರು, ಲೀಗಲ್ ಒಪಿನಿಯನ್-1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು"** ಎಂದಿರುವುದನ್ನು **"ಅಪರ ನಿಬಂಧಕರು, ವಿಚಾರಣೆ-7, ಕರ್ನಾಟಕ ಲೋಕಾಯುಕ್ತ, ಬೆಂಗಳೂರು"** ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು. ಉಳಿದಂತೆ, ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

**PR 210**

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 617 ಪಿಪಿಇ 2013, ಬೆಂಗಳೂರು, ದಿನಾಂಕ: 30ನೇ ಜನವರಿ, 2014**

ಸರ್ಕಾರದ ಆದೇಶ ಸಂಖ್ಯೆ: ಒಇ 222 ಪಿಪಿಇ 2011, ದಿನಾಂಕ: 27-12-2011ರ ಪ್ರಸ್ತಾವನೆ ಭಾಗದ 3ನೇ ಪುಟದ 5ನೇ ಸಾಲಿನಲ್ಲಿ **"ದಿನಾಂಕ: 03-05-2011ರಿಂದ"** ಎಂಬುದರ ಬದಲಾಗಿ **"ತಕ್ಷಣದಿಂದ"** ಎಂದೂ ಹಾಗೂ ಆದೇಶ ಭಾಗದ 5ನೇ ಸಾಲಿನಲ್ಲಿ **"ದಿನಾಂಕ: 03-05-2011ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ"** ಎಂಬುದರ ಬದಲಾಗಿ **"ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ನೌಕರರು ಸಲ್ಲಿಸಿರುವ ವಿಶೇಷ ರಜಾ ಅರ್ಜಿ ಕ್ರಿಮಿನಲ್ ಮಿಸಲೇನಿಯಸ್ ಪ್ರಕರಣ ಸಂಖ್ಯೆ: 16571/2001ರಲ್ಲಿ ಮಾನ್ಯ ಸವೋಚ್ಚ ನ್ಯಾಯಾಲಯವು ನೀಡುವ ತೀರ್ಪಿಗೆ ಒಳಪಟ್ಟು, ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ"** ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೇಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

**PR 214**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಮಾನ್ಯ ಲೋಕಾಯುಕ್ತರಿಂದ ವಿಚಾರಣೆ – ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 452 ಎಸ್‌ಇಎನ್ 2006, ದಿನಾಂಕ : 15–09–2010.
2. ಮಾನ್ಯ ಲೋಕಾಯುಕ್ತರವರ ವಿಚಾರಣಾ ವರದಿ ಸಂಖ್ಯೆ: ಲೋಕ್/ಎಆರ್‌ಇ–4/ಇಎನ್‌ಕ್ಯೂ–54/2010 ದಿನಾಂಕ : 29–11–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರು ನಿರ್ದೇಶಕರಾಗಿ ಕಾರ್ಯ ನಿರ್ವಹಿಸುವಾಗ ಅನಾವಶ್ಯಕವಾಗಿ ರೂ.50,000/–ಮೊತ್ತವನ್ನು ಎ.ಸಿ.ಬಿಲ್ ಮೂಲಕ ಡ್ರಾ ಮಾಡಿ ಯಾವುದೇ ಸಾಮಗ್ರಿ ಖರೀದಿಗೆ ಉಪಯೋಗಿಸದೇ ಅಥವಾ ಸರ್ಕಾರದ ಲೆಕ್ಕಕ್ಕೆ ಜಮಾ ಮಾಡದೇ ತಡೆಹಿಡಿದಿರುವ ಮತ್ತು ಎನ್.ಡಿ.ಸಿ. ಬಿಲ್ಲನ್ನು ನಿಗದಿತ ಸಮಯದೊಳಗೆ ಒಪ್ಪಿಸದೇ ಅನಾವಶ್ಯಕವಾಗಿ ವಿಳಂಬಮಾಡಿರುತ್ತಾರೆಂದು, ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಯೋಗ್ಯವಾದ ಪ್ರಕರಣವೆಂದು ನಿರ್ಣಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14ಎ ರಡಿ ಪೂರ್ಣ ಪ್ರಮಾಣದ ವಿಚಾರಣೆ ನಡೆಸಲು ಮಾನ್ಯ ಲೋಕಾಯುಕ್ತರಿಗೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ಪತ್ರದಲ್ಲಿ ಮಾನ್ಯ ಲೋಕಾಯುಕ್ತರು ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧದ ಆರೋಪವನ್ನು ವಿಚಾರಣೆ ನಡೆಸಲು ನೇಮಿಸಲಾದ ವಿಚಾರಣಾಧಿಕಾರಿಯವರ ವಿಚಾರಣಾವರದಿಯನ್ನು ಪರಿಶೀಲಿಸಿ ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ಮೇಲಿನ ಆರೋಪವು ಸಾಬೀತಾಗಿರುವ ದುರ್ನಡತೆಯೆಂದು ಪರಿಗಣಿಸಿ ಇದು ಸಣ್ಣ ಪ್ರಮಾಣದ ದಂಡನೆಗೆ ಒಳಪಡಿಸಬಹುದಾದ ಪ್ರಕರಣವಾಗಿದೆ. ಅಲ್ಲದೇ ಎಸಿ ಬಿಲ್‌ನಲ್ಲಿ ದಿನಾಂಕ:09–04–1996ರಂದು ರೂ.50,000/–ಗಳನ್ನು ಡ್ರಾ ಮಾಡಿದ್ದರೂ ಆ ಹಣವನ್ನು ದಿನಾಂಕ:30–08–1997ರಂದು ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಿರುವುದನ್ನು ಗಮನಿಸಿದ್ದಾರೆ. ಆದರೆ ಆಪಾದಿತ ಸರ್ಕಾರಿ ಅಧಿಕಾರಿಯವರು ದಿನಾಂಕ:30–04–2012ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿಯಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 8(i) ರಿಂದ (iv)ರ ಪ್ರಕಾರ ಸಣ್ಣ ಪ್ರಮಾಣದ ದಂಡನೆಯನ್ನು ವಿಧಿಸಲು ಕಾರ್ಯಸಾಧ್ಯವಿಲ್ಲದೇ ಇರುವುದರಿಂದ ಹಾಗೂ ಸರ್ಕಾರಕ್ಕೆ ಯಾವುದೇ ತರಹದ ನಷ್ಟ ಉಂಟಾಗದೇ ಇರುವುದರಿಂದ ಆಪಾದಿತ ಅಧಿಕಾರಿಯಾದ ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧದ ವಿಚಾರಣೆಯಲ್ಲಿ ಯಾವುದೇ ಕ್ರಮ ಇರುವುದಿಲ್ಲವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಹೆಚ್.ಗಂಗಯ್ಯ, ಹಿಂದಿನ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧದ ಮಾನ್ಯ ಲೋಕಾಯುಕ್ತರಿಗೆ ವಹಿಸಲಾದ ಆರೋಪದಿಂದ ದೋಷಮುಕ್ತರನ್ನಾಗಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 452 ಎಸ್‌ಇಎನ್ 2006, ಬೆಂಗಳೂರು ದಿನಾಂಕ :03–03–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್.ಗಂಗಯ್ಯ, ನಿವೃತ್ತ ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು, ಇವರ ವಿರುದ್ಧ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 452 ಎಸ್‌ಇಎನ್ 2006, ದಿನಾಂಕ: 15–09–2010ರಲ್ಲಿ ಮಾಡಲಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ಮಾನ್ಯ ಲೋಕಾಯುಕ್ತರು ಸರ್ಕಾರಕ್ಕೆ ಸಲ್ಲಿಸಿದ ವರದಿಯನ್ನು ಅಂಗೀಕರಿಸಿ ಸರ್ಕಾರವು ಈ ಅಧಿಕಾರಿಯನ್ನು ದೋಷಮುಕ್ತರೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ|| ಗೀತಾ.ಎಲ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–3).

**P.R: 324**

## ಒಳಾಡಳಿತ ಸಚಿವಾಲಯ

**ವಿಷಯ :** ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿಯ ಕಾನೂನು ಅಧಿಕಾರಿ(ಕಿರಿಯ) ತಾತ್ಕಾಲಿಕ ಹುದ್ದೆಯನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಒಇ 40 ಪಿಪಿಇ 2012, ದಿನಾಂಕ: 03–07–2012
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಶಾ–1/237/2011–12, ದಿನಾಂಕ: 31–10–2013

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ದಿನಾಂಕ: 03–07–2012ರ ಸರ್ಕಾರದ ಆದೇಶದನ್ವಯ ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಂದು ಕಾನೂನು ಅಧಿಕಾರಿ (ಕಿರಿಯ) ಇವರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಯವರೆಗೆ ಅಥವಾ ಸದರಿ ಕಛೇರಿಯು ಅಸ್ತಿತ್ವದಲ್ಲಿ ಇರುವವರೆಗೆ ಇವೆರಡರಲ್ಲಿ ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿನ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 31–10–2013ರ ಪತ್ರದಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ: 1ರಲ್ಲಿನ ಸರ್ಕಾರಿ ಆದೇಶದನ್ವಯ ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ಸೃಜನೆಯಾದ ಒಂದು ಕಾನೂನು ಅಧಿಕಾರಿ (ಕಿರಿಯ) ಈ ತಾತ್ಕಾಲಿಕ ಹುದ್ದೆಯ ಕಾರ್ಯಾವಧಿಯು ದಿನಾಂಕ: 02–07–2013 ಮುಕ್ತಾಯಗೊಂಡಿರುತ್ತದೆ. ಆದರೆ, ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿ ಮುಂದುವರೆದಿರುತ್ತದೆ. ಆದ್ದರಿಂದ, ಇಲಾಖೆಯ 945 ತಾತ್ಕಾಲಿಕ ಹುದ್ದೆಗಳ ಅವಧಿಯನ್ನು ದಿನಾಂಕ: 31–03–2014ರ ವರೆಗೆ ವಿಸ್ತರಿಸಿರುವಂತೆ ಸದರಿ ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿಯ ಕಾನೂನು ಅಧಿಕಾರಿ (ಕಿರಿಯ) ಈ ತಾತ್ಕಾಲಿಕ ಹುದ್ದೆಯ ಅವಧಿಯನ್ನು ಸಹ ಏಕರೂಪವಾಗಿ ದಿನಾಂಕ: 31–03–2014ರ ವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 582 ಪಿಪಿಇ 2013, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ, 2014**

ಮೇಲ್ಕಂಡ ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಮಂಗಳೂರು ನಗರದ ಆರಕ್ಷಕ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ಸೃಜನೆಯಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಕಾನೂನು ಅಧಿಕಾರಿ (ಕಿರಿಯ) ಈ ತಾತ್ಕಾಲಿಕ ಹುದ್ದೆಯನ್ನು ಒಂದು ವರ್ಷದ ಅವಧಿಯು ಪೂರ್ಣಗೊಂಡ ದಿನಾಂಕದಿಂದ ದಿನಾಂಕ: 31–03–2014ರ ವರೆಗೆ ಅಥವಾ ಸಂಬಂಧಪಟ್ಟ ಕಛೇರಿಯು ಅಸ್ತಿತ್ವದಲ್ಲಿರುವವರೆಗೆ ಇವೆರಡಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014 ನ್ಯಾಯಪರಿಪಾಲನೆ –00–114 ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –0–02– ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, 002–ಅಧಿಕಾರಿಗಳ ವೇತನ, 003–ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಅಪರ ಮುಖ್ಯ ಕಾರ್ಯದರ್ಶಿವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ದೇವೆಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR 218

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 35 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ) ಇವರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ : ಲಾ 38 ಪಿಪಿಇ 77, ದಿನಾಂಕ: 24–09–1977
2) ಸರ್ಕಾರದ ಆದೇಶ ಸಂಖ್ಯೆ : ಲಾ 48 ಪಿಪಿಇ 78, ದಿನಾಂಕ: 21–09–1978
3) ಸರ್ಕಾರದ ಆದೇಶ ಸಂಖ್ಯೆ : ಲಾ 21 ಪಿಪಿಇ 79, ದಿನಾಂಕ: 01/03–05–1979
4) ಸರ್ಕಾರದ ಆದೇಶ ಸಂಖ್ಯೆ : ಲಾ 130 ಎಲ್‌ಎಜಿ 79, ದಿನಾಂಕ: 07–10–1980
5) ಸರ್ಕಾರದ ಆದೇಶ ಸಂಖ್ಯೆ : ಲಾ 100 ಪಿಪಿಇ 81, ದಿನಾಂಕ: 30–04–1981
6) ಸರ್ಕಾರದ ಆದೇಶ ಸಂಖ್ಯೆ : ಲಾ 200 ಪಿಪಿಇ 82, ದಿನಾಂಕ: 29–11–1982
7) ಸರ್ಕಾರದ ಆದೇಶ ಸಂಖ್ಯೆ : ಲಾ 199 ಪಿಪಿಇ 82, ದಿನಾಂಕ: 22–12–1982
8) ಸರ್ಕಾರದ ಆದೇಶ ಸಂಖ್ಯೆ : ಲಾ 164 ಪಿಪಿಇ 85, ದಿನಾಂಕ: 13–05–1986
9) ಸರ್ಕಾರದ ಆದೇಶ ಸಂಖ್ಯೆ : ಲಾ 125 ಎಲ್‌ಸಿಇ 89, ದಿನಾಂಕ: 24–09–1990
10) ಸರ್ಕಾರದ ಆದೇಶ ಸಂಖ್ಯೆ : ಒಇ 166 ಪಿಪಿಇ 2008, ದಿನಾಂಕ: 30–01–2012
11) ಸರ್ಕಾರದ ಆದೇಶ ಸಂಖ್ಯೆ : ಒಇ 120 ಪಿಪಿಇ 2013, ದಿನಾಂಕ: 18–07–2013
12) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಕೇಂಸ/ವಿವ/27/2011–12, ದಿನಾಂಕ: 07–07–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ದಿನಾಂಕ: 24–09–1977ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ 2ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ದಿನಾಂಕ: 21–09–1978ರ ಸರ್ಕಾರದ ಆದೇಶದನ್ವಯ, 4, 5 ಮತ್ತು 6ನೇ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ 3 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳು, ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ಟ್ರಾಫಿಕ್ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯು ಹಾಗೂ ಬೆಂಗಳೂರು ನಗರ, ಬೆಂಗಳೂರು ವಲಯ, ಬೆಂಗಳೂರು, ಮೈಸೂರು ವಲಯ, ಮೈಸೂರು ಮತ್ತು ಗುಲ್ಬರ್ಗಾ ವಲಯ, ಗುಲ್ಬರ್ಗಾದ ಅಭಿಯೋಗ ಉಪನಿರ್ದೇಶಕರ ಕಛೇರಿಗಳಿಗೆ ಹೊಂದಿಕೊಂಡಂತೆ 4 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳು 08 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ/ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿನ ದಿನಾಂಕ: 01/03–05–1979ರ ಸರ್ಕಾರದ ಆದೇಶದನ್ವಯ ಅಡಿಷನಲ್ ಚೀಫ್ ಜ್ಯುಡೀಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಬೆಂಗಳೂರು ಜಿಲ್ಲೆಗೆ ಹೊಂದಿಕೊಂಡಂತೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿನ ದಿನಾಂಕ: 07–10–1980ರ ಸರ್ಕಾರದ ಆದೇಶದನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿಗೆ ಹೊಂದಿಕೊಂಡಂತೆ 02 ಸಹಾಯಕ ಅಭಿಯೋಗ ನಿರ್ದೇಶಕರ (ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು) ಹುದ್ದೆಯನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಲ್ಲಿನ ದಿನಾಂಕ: 30–04–1981ರ ಅನ್ವಯ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳ ಆರಕ್ಷಕ ಅಧೀಕ್ಷಕರ ಕಛೇರಿಗೆ ಹೊಂದಿಕೊಂಡಂತೆ 21 ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗಳನ್ನು ಹಾಗೂ ಕೆ.ಜಿ.ಎಫ್.ನ ಆರಕ್ಷಕ ಅಧೀಕ್ಷಕರ ಕಛೇರಿಗೆ ಮತ್ತು ಬೆಂಗಳೂರು ನಗರದ ಪೊಲೀಸ್ ಆಯುಕ್ತರ ಕಛೇರಿಗೆ ಹೊಂದಿಕೊಂಡಂತೆ ತಲಾ ಒಂದೊಂದು ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಯನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಒಟ್ಟಾರೆ 23 ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (6)ರಲ್ಲಿನ ದಿನಾಂಕ: 29–11–1982ರ ಸರ್ಕಾರದ ಆದೇಶದನ್ವಯ ಬೆಂಗಳೂರು ಜಿಲ್ಲೆಯ 2ನೇ ಅಡಿಷನಲ್ ಚೀಫ್ ಜ್ಯುಡೀಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು 3ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಕ್ಕೆ ಸ್ಥಳಾಂತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (7)ರಲ್ಲಿನ ದಿನಾಂಕ: 22–12–1982ರ ಸರ್ಕಾರದ ಆದೇಶದನ್ವಯ ಚೀಫ್ ಜ್ಯುಡೀಷಿಯಲ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯ, ಹುಬ್ಬಳ್ಳಿ ಮತ್ತು ಚೀಫ್ ಜ್ಯುಡೀಷಿಯಲ್ ಮ್ಯಾಜಿಸ್ಟ್ರೇಟ್ 2ನೇ ನ್ಯಾಯಾಲಯ, ಮಂಗಳೂರು ಇಲ್ಲಿಗೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ 02 ಹುದ್ದೆಗಳನ್ನು ಕ್ರಮವಾಗಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ, ಬೆಂಗಳೂರು ಮತ್ತು ಅಭಿಯೋಗ ಉಪನಿರ್ದೇಶಕರ ಕಛೇರಿ, ಮೈಸೂರು ವಲಯ, ಮೈಸೂರು ಇಲ್ಲಿಗೆ ಸಮಾನ ಹುದ್ದೆಯಾದ ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಳಾಂತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (8)ರಲ್ಲಿನ ದಿನಾಂಕ: 13–05–1986 ಸರ್ಕಾರದ ಆದೇಶದನ್ವಯ ಅಭಿಯೋಗ ಉಪನಿರ್ದೇಶಕರ ಕಛೇರಿ, ಮೈಸೂರು ವಲಯ, ಮೈಸೂರು ಇಲ್ಲಿನ ಒಂದು ಸಹಾಯಕ ಅಭಿಯೋಗ ನಿರ್ದೇಶಕರ ಹುದ್ದೆಯನ್ನು ಬೆಂಗಳೂರು ನಗರದ ಪೊಲೀಸ್ ಆಯುಕ್ತರ ಕಛೇರಿಗೆ ಸ್ಥಳಾಂತರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (9)ರಲ್ಲಿನ ದಿನಾಂಕ: 24–09–1990ರ ಸರ್ಕಾರಿ ಆದೇಶದಲ್ಲಿ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ 2, 3, 4, 5 ಮತ್ತು 6ನೇ ನ್ಯಾಯಾಲಯಗಳು, ಬೆಂಗಳೂರು ನಗರ ಇವುಗಳನ್ನು ಕ್ರಮವಾಗಿ 7, 8, 9, 10 ಮತ್ತು 11ನೇ ಅಡಿಷನಲ್ ಚೀಫ್ ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗಳೆಂದು ಉನ್ನತೀಕರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (10) ರಲ್ಲಿನ ದಿನಾಂಕ: 30–01–2012ರ ಸರ್ಕಾರಿ ಅಧಿಸೂಚನೆಯಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಪರಿಷ್ಕರಿಸಿದ್ದು, ಅಧಿಸೂಚನೆಯ ಕ್ರಮ ಸಂಖ್ಯೆ: 4ರಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಸಹಾಯಕ ಅಭಿಯೋಗ ನಿರ್ದೇಶಕರು ಎಂದಿದ್ದ ವೃಂದ ನಾಮವನ್ನು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ) ಎಂದು ಬದಲಾವಣೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (11)ರಲ್ಲಿನ ದಿನಾಂಕ: 18–07–2013ರ ಸರ್ಕಾರಿ ಆದೇಶದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಎಲ್ಲಾ 945 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 31–03–2014ರ ವರೆಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (12) ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ದಿನಾಂಕ: 07–07–2011ರ ಪತ್ರದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ ಕ್ರಮ ಸಂಖ್ಯೆ (11) ರಲ್ಲಿನ ಸರ್ಕಾರಿ ಆದೇಶದನ್ವಯ ಸೃಜಿಸಿದ, ಸ್ಥಳಾಂತರಿಸಿದ ಹಾಗೂ ವೃಂದ ನಾಮವನ್ನು ಬದಲಾಯಿಸಿದ ಹುದ್ದೆಗಳನ್ನು ಕಾಲ–ಕಾಲಕ್ಕೆ ಮುಂದುವರಿಸಿಕೊಂಡು ಬಂದು ಅಂತಿಮವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (11)ರ ಸರ್ಕಾರಿ ಆದೇಶದನ್ವಯ ದಿನಾಂಕ: 31–03–2014ರವರೆಗೆ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಿದೆ. ಅದರಲ್ಲಿ, 35 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ) ರವರ ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವುದು ಇಲಾಖೆಯ ದೈನಂದಿನ ಆಡಳಿತಾತ್ಮಕ ಕಾರ್ಯದ ದೃಷ್ಟಿಯಿಂದ ಅತಿ ಅವಶ್ಯಕವಾಗಿದ್ದು, ಇವುಗಳನ್ನು ಇಲಾಖೆಯ ಹಿತದೃಷ್ಟಿಯಿಂದ ಅವಶ್ಯಕವಾಗಿದೆ. ಆದ್ದರಿಂದ, ಸದರಿ 35 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ) ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 299 ಪಿಪಿಇ 2011, ಬೆಂಗಳೂರು, ದಿನಾಂಕ: 06ನೇ ಫೆಬ್ರವರಿ, 2014**

ಮೇಲೆ ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಈ ಕೆಳಕಂಡ ಅಂಕಣ (2)ರಲ್ಲಿನ ಕಛೇರಿಗಳಿಗೆ ಹೊಂದಿಕೊಂಡಂತೆ ಅಂಕಣ (3)ರ ಸರ್ಕಾರಿ ಆದೇಶದನ್ವಯ ಸೃಜನೆಯಾಗಿರುವ 28 ಕಾನೂನು ಅಧಿಕಾರಿ (ಕಿರಿಯ)ರವರ ಹಾಗೂ 07 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಒಟ್ಟಾರೆ 35 ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ)ರವರ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸಿದೆ.

| ಕ್ರಮ ಸಂಖ್ಯೆ | ಹುದ್ದೆ ಮತ್ತು ಹುದ್ದೆಯ ಕಛೇರಿ | ಹುದ್ದೆಯು ಮಂಜೂರಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| 1. | ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಬೆಂಗಳೂರು ನಗರ ವಿಭಾಗ | ಲಾ 48 ಪಿಪಿಇ 78, ದಿನಾಂಕ: 21–09–1978 |
| 2. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 7ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 38 ಪಿಪಿಇ 77, ದಿನಾಂಕ: 24–09–1977 |

| ಕ್ರಮ ಸಂಖ್ಯೆ | ಹುದ್ದೆ ಮತ್ತು ಹುದ್ದೆಯ ಕಛೇರಿ | ಹುದ್ದೆಯು ಮಂಜೂರಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| 3. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 8ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 200 ಪಿಪಿಇ 82, ದಿನಾಂಕ: 29–11–1982 (ಸ್ಥಳಾಂತರ) |
| 4. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 9ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 48 ಪಿಪಿಇ 78, ದಿನಾಂಕ: 21–09–1978 |
| 5. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 10ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 48 ಪಿಪಿಇ 78, ದಿನಾಂಕ: 21–09–1978 |
| 6. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 11ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ | ಲಾ 48 ಪಿಪಿಇ 78, ದಿನಾಂಕ: 21–09–1978 |
| 7. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಎಂಎಂ ಸಂಚಾರಿ ನ್ಯಾಯಾಲಯ, ಬೆಂಗಳೂರು | ಲಾ 48 ಪಿಪಿಇ 78, ದಿನಾಂಕ: 21–09–1978 |
| 8. | ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಬೆಂಗಳೂರು ವಿಭಾಗ | ಲಾ 48 ಪಿಪಿಇ 78, ದಿನಾಂಕ: 21–09–1978 |
| 9. | ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಮೈಸೂರು ವಿಭಾಗ | ಲಾ 199 ಪಿಪಿಇ 82, ದಿನಾಂಕ: 22–12–1982 (ಮಂಗಳೂರಿನಿಂದ ಸ್ಥಳಾಂತರಗೊಂಡ ಹುದ್ದೆ) |
| 10. | ಕಾನೂನು ಅಧಿಕಾರಿ (ಕಿರಿಯ), ಕಾನೂನು ಅಧಿಕಾರಿ (ಹಿರಿಯ)ರವರ ಕಛೇರಿ, ಗುಲ್ಬರ್ಗಾ ವಿಭಾಗ | ಲಾ 48 ಪಿಪಿಇ 78, ದಿನಾಂಕ: 21–09–1978 |
| 11. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆಎಂ ನ್ಯಾಯಾಲಯ, ಬೆಂಗಳೂರು | ಲಾ 21 ಪಿಪಿಇ 79, ದಿನಾಂಕ: 01/03–05–1979 |
| 12. | ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್ಎಜಿ 79, ದಿನಾಂಕ: 07–10–1980 |
| 13. | ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 130 ಎಲ್ಎಜಿ 79, ದಿನಾಂಕ: 07–10–1980 |
| 14. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ | ಲಾ 100 ಪಿಪಿಇ 81, ದಿನಾಂಕ: 30–04–1981 |
| 15. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಬೆಂಗಳೂರು ಗ್ರಾಮಾಂತರ | ಲಾ 100 ಪಿಪಿಇ 81, ದಿನಾಂಕ: 30–04–1981 |
| 16. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಕೋಲಾರ | ಲಾ 100 ಪಿಪಿಇ 81, ದಿನಾಂಕ: 30–04–1981 |
| 17. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಕೆ.ಜಿ.ಎಫ್. | ಲಾ 100 ಪಿಪಿಇ 81, ದಿನಾಂಕ: 30–04–1981 |
| 18. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ತುಮಕೂರು | ಲಾ 100 ಪಿಪಿಇ 81, ದಿನಾಂಕ: 30–04–1981 |
| 19. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಮೈಸೂರು | ಲಾ 100 ಪಿಪಿಇ 81, ದಿನಾಂಕ: 30–04–1981 |
| 20. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಮಂಡ್ಯ | ಲಾ 100 ಪಿಪಿಇ 81, ದಿನಾಂಕ: 30–04–1981 |
| 21. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಹಾಸನ | ಲಾ 100 ಪಿಪಿಇ 81, ದಿನಾಂಕ: 30–04–1981 |
| 22. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಮಡಿಕೇರಿ | ಲಾ 100 ಪಿಪಿಇ 81, ದಿನಾಂಕ: 30–04–1981 |
| 23. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಚಿತ್ರದುರ್ಗ | ಲಾ 100 ಪಿಪಿಇ 81, ದಿನಾಂಕ: 30–04–1981 |
| 24. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಶಿವಮೊಗ್ಗ | ಲಾ 100 ಪಿಪಿಇ 81, ದಿನಾಂಕ: 30–04–1981 |
| 25. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಬಳ್ಳಾರಿ | ಲಾ 100 ಪಿಪಿಇ 81, ದಿನಾಂಕ: 30–04–1981 |
| 26. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಮಂಗಳೂರು | ಲಾ 100 ಪಿಪಿಇ 81, ದಿನಾಂಕ: 30–04–1981 |
| 27. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಕಾರವಾರ | ಲಾ 100 ಪಿಪಿಇ 81, ದಿನಾಂಕ: 30–04–1981 |
| 28. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಚಿಕ್ಕಮಗಳೂರು | ಲಾ 100 ಪಿಪಿಇ 81, ದಿನಾಂಕ: 30–04–1981 |
| 29. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಬೆಳಗಾವಿ | ಲಾ 100 ಪಿಪಿಇ 81, ದಿನಾಂಕ: 30–04–1981 |
| 30. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಬಿಜಾಪುರ | ಲಾ 100 ಪಿಪಿಇ 81, ದಿನಾಂಕ: 30–04–1981 |
| 31. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಧಾರವಾಡ | ಲಾ 100 ಪಿಪಿಇ 81, ದಿನಾಂಕ: 30–04–1981 |
| 32. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಗುಲ್ಬರ್ಗ | ಲಾ 100 ಪಿಪಿಇ 81, ದಿನಾಂಕ: 30–04–1981 |
| 33. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ರಾಯಚೂರು | ಲಾ 100 ಪಿಪಿಇ 81, ದಿನಾಂಕ: 30–04–1981 |
| 34. | ಕಾನೂನು ಅಧಿಕಾರಿ (ಕಿರಿಯ), ಆರಕ್ಷಕ ಅಧೀಕ್ಷಕರ ಕಛೇರಿ, ಬೀದರ್ | ಲಾ 100 ಪಿಪಿಇ 81, ದಿನಾಂಕ: 30–04–1981 |
| 35. | ಕಾನೂನು ಅಧಿಕಾರಿ (ಕಿರಿಯ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 199 ಪಿಪಿಇ 82, ದಿನಾಂಕ: 22–12–1982 (ಹುಬ್ಬಳ್ಳಿಯಿಂದ ಸ್ಥಳಾಂತರಗೊಂಡ ಹುದ್ದೆ) |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ '2014–ನ್ಯಾಯಾಪರಿಪಾಲನೆ –00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು' ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ: 27–09–1979ರ ಕಂಡಿಕೆ 2(iii)ರನ್ವಯ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 429 ವೆಚ್ಚ–11/2013, ದಿನಾಂಕ: 10–01–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ದೇವೆಂದ್ರಪ್ಪ ಕಟ್ಟಿಮನಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

PR 219

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ : 15–03–2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ : 04–09–2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 13 ಪಿಎಸ್‌ಆರ್ 2013 ದಿನಾಂಕ : 05–04–2013, 26–04–2013, 02–05–2013, 28–05–2013, 22–06–2013, 03–07–2013, 29–07–2013, 28–08–2013, 16–09–2013, 08–10–2013, ಮತ್ತು 07–11–2013.

**ಪ್ರಸ್ತಾವನೆ :**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗಧಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತಿಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳು "ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2013–14ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4750.00 ಕೋಟಿಗಳನ್ನು ಒದಗಿಸಲಾಗಿದೆ. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರೂ.3000.00 ಕೋಟಿಗಳನ್ನು ಈಗಾಗಲೇ ಬಿಡುಗಡೆ ಮಾಡಿದೆ.
4. 2013–14ನೇ ಸಾಲಿನ ಡಿಸೆಂಬರ್–2013 ಹಾಗೂ ಜನವರಿ 2014ರ ಮಾಹೆಗೆ ಕ್ರಮವಾಗಿ ರೂ.375.00 ಕೋಟಿ ಮತ್ತು ರೂ.175.00 ಕೋಟಿಗಳನ್ನು ಅಂದರೆ, ಒಟ್ಟಾರೆ ರೂ.550.00 ಕೋಟಿಗಳಷ್ಟು ಸಹಾಯಧನವನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 13 ಪಿಎಸ್‌ಆರ್ 2013 ಬೆಂಗಳೂರು, ದಿನಾಂಕ : 29–11–2013**

1. ಸರ್ಕಾರವು "ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ರೂ.550.00 ಕೋಟಿಗಳ (ರೂ.ಐನೂರ ಐವತ್ತು ಕೋಟಿಗಳು ಮಾತ್ರ) ಸಹಾಯಧನವನ್ನು ಕ್ರಮವಾಗಿ ಡಿಸೆಂಬರ್ –2013ರ ಮಾಹೆಗೆ ರೂ.375.00 ಕೋಟಿ ಹಾಗೂ ಜನವರಿ 2014ರ ಮಾಹೆಗೆ ಅಂಶಿಕ ಮುಂಗಡವಾಗಿ ರೂ.175.00 ಕೋಟಿಗಳನ್ನು, ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ಯಡಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

**(ರೂ. ಕೋಟಿಗಳಲ್ಲಿ)**

| ವಿದ್ಯುತ್ ಸರಬರಾಜು ಕಂಪನಿಗಳು | 10 ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ಕುಟೀರಜ್ಯೋತಿ ಸ್ಥಾವರಗಳಿಗೆ | 2013–14ರ ಡಿಸೆಂಬರ್ –2013 ಹಾಗೂ ಜನವರಿ 2014ರ ಮಾಹೆಗಳಿಗೆ ಬಿಡುಗಡೆ |
|---|---|---|---|
| ಬೆವಿಕಂ | 89.00 | 1.00 | 90.00 |
| ಮವಿಕಂ | 37.00 | 1.00 | 38.00 |
| ಹುವಿಕಂ | 203.00 | 4.00 | 207.00 |
| ಗುವಿಕಂ | 119.00 | 3.00 | 122.00 |
| ಚಾವಿಸನಿನಿ | 83.00 | 2.00 | 85.00 |
| ಹುಕ್ಕೇರಿ | 8.00 | 0.00 | 8.00 |
| **ಒಟ್ಟು** | **539.00** | **11.00** | **550.00** |

ಮೇಲಿನ ಕೋಷ್ಠಕದಲ್ಲಿರುವಂತೆ ಡಿಸೆಂಬರ್ –2013 ಹಾಗೂ ಜನವರಿ 2014ರ ಮಾಹೆಗಳಿಗೆ ಬಿಡುಗಡೆ ಮಾಡಿ ಆದೇಶಿಸಿರುವ ರೂ.550.00 ಕೋಟಿಗಳನ್ನು ಈ ಕೆಳಕಂಡಂತೆ ಮರುಹಂಚಿಕೆ ಮಾಡಿದೆ.

(ರೂ. ಕೋಟಿಗಳಲ್ಲಿ)

| ವಿದ್ಯುತ್ ಸರಬರಾಜು ಕಂಪನಿಗಳು | ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ | | | ವಿದ್ಯುತ್ ಸರಬರಾಜು ಕಂಪನಿಗಳಿಗೆ ನೇರ ಬಿಡುಗಡೆ |
|---|---|---|---|---|
| | ನೇರ ಬಿಡುಗಡೆ | ಅಲ್ಪಾವಧಿ/ ಮಧ್ಯಮಾವಧಿ ವಿದ್ಯುತ್ ಖರೀದಿ ಬಾಕಿ ಬಾಬ್ತು ಹೊಂದಾಣಿಕೆಯ ಮೂಲಕ ಬಿಡುಗಡೆ | ಒಟ್ಟು ಮೊತ್ತ | |
| ಬೆವಿಕಂ | 90.00 | 15.00 | 105.00 | 0.00 |
| ಮವಿಕಂ | 38.00 | 6.00 | 44.00 | 0.00 |
| ಹುವಿಕಂ | 122.00 | 0.00 | 122.00 | 78.00 |
| ಗುವಿಕಂ | 83.00 | 0.00 | 83.00 | 39.00 |
| ಚಾವಿಸನಿನಿ | 46.00 | 0.00 | 46.00 | 33.00 |
| **ಒಟ್ಟು** | **379.00** | **21.00** | **400.00** | **150.00** |

2. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿರುವ ರೂ.78.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ.8.00 ಕೋಟಿಗಳೆಂದು ಲೆಕ್ಕೀಕರಿಸುವುದು.
3. ಮೇಲಿನ ಎಲ್ಲಾ ಹೊಂದಾಣಿಕೆಗಳನ್ನು ಪರಿಗಣಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 400.00 ಕೋಟಿಗಳು, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ರೂ.78.00 ಕೋಟಿಗಳು, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗೆ ರೂ.39.00 ಕೋಟಿಗಳು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಕ್ಕೆ ರೂ.33.00 ಕೋಟಿಗಳನ್ನು ನೇರ ಬಿಡುಗಡೆ ಮಾಡಿದೆ.
4. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಿಂದ ರೂ.15.00 ಕೋಟಿಗಳನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮತ್ತು ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತದಿಂದ ರೂ. 6.00 ಕೋಟಿಗಳನ್ನು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಅಲ್ಪಾವಧಿ/ ಮಧ್ಯಮಾವಧಿ ವಿದ್ಯುತ್ ಖರೀದಿ ಬಾಬ್ತು ಹೊಂದಾಣಿಕೆಯ ಮೂಲಕ ಸರಿಹೊಂದಿಸಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.
5. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ, ಮತ್ತು ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.
6. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.
7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.
8. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್‌ಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
9. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. FD 1430 EXP-1/2013, ಬೆಂಗಳೂರು, ದಿನಾಂಕ: 28–11–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಎ.ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**P.R: 72**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಪ್ರತ್ಯೇಕ ಅಂತರ್ಜಲ ನಿರ್ದೇಶನಾಲಯ ಸ್ಥಾಪಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಅಜಅ 2013, ದಿನಾಂಕ: 23–11–2013.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 413 ಸಅಸೇ 2012, ದಿನಾಂಕ: 29–04–2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂತರ್ಜಲ ವಿಭಾಗವನ್ನು ಸಿಬ್ಬಂದಿಯೊಂದಿಗೆ ಪ್ರತ್ಯೇಕಿಸಿ, ರಾಜ್ಯದಲ್ಲಿ ಅಂತರ್ಜಲ ಅಭಿವೃದ್ಧಿ, ಸದ್ಬಳಕೆ ಹಾಗೂ ಸಂರಕ್ಷಣೆಗಾಗಿ ಪ್ರತ್ಯೇಕ "ಅಂತರ್ಜಲ ನಿರ್ದೇಶನಾಲಯ" ವನ್ನು ಸ್ಥಾಪಿಸಲಾಗಿದೆ. ನಿರ್ದೇಶಕರು ಇದರ ಮುಖ್ಯಸ್ಥರಾಗಿದ್ದು, ನಿರ್ದೇಶನಾಲಯದ ಕೇಂದ್ರ ಕಛೇರಿ ಬೆಂಗಳೂರಿನಲ್ಲಿರತಕ್ಕದ್ದೆಂದು ತಿಳಿಸಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಈಗಾಗಲೇ ಸ್ವತಂತ್ರವಾಗಿ ಕಾರ್ಯನಿರ್ವಹಿಸುತ್ತಿರುವ ಸಣ್ಣ ನೀರಾವರಿ ಇಲಾಖೆಯನ್ನು ಹಾಲಿ ಇರುವ ಸಿಬ್ಬಂದಿ / ಅಧಿಕಾರಿಗಳೊಂದಿಗೆ ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಿಂದ ಬೇರ್ಪಡಿಸಿ, "ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ" ಎಂದು ಪದನಾಮೀಕರಿಸಿ ಆದೇಶಿಸಿದೆ. ಈ ಹಿನ್ನಲೆಯಲ್ಲಿ ದಿನಾಂಕ: 23–11–2013ರ ಆದೇಶದಲ್ಲಿ ಪ್ರತ್ಯೇಕ ಅಂತರ್ಜಲ ನಿರ್ದೇಶನಾಲಯವನ್ನು "ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ"ಯ ಅಧೀನದಲ್ಲಿ ಕಾರ್ಯನಿರ್ವಹಿಸಲು "ಅಂತರ್ಜಲ ನಿರ್ದೇಶನಾಲಯ"ವನ್ನು ಸ್ಥಾಪಿಸುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಅಜಅ 2013, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಆದೇಶ ಸಂಖ್ಯೆ: ಸನೀಇ 13 ಅಜಅ 2013, ದಿನಾಂಕ: 23–11–2013 ರಲ್ಲಿ ಸ್ಥಾಪನೆಯಾಗಿರುವ ಅಂತರ್ಜಲ ನಿರ್ದೇಶನಾಲಯವು ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಸಚಿವಾಲಯದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತದೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.330**

**SC.200**

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಪ್ರತ್ಯೇಕ ಅಂತರ್ಜಲ ನಿರ್ದೇಶನಾಲಯ ಸ್ಥಾಪಿಸುವ ಕುರಿತು.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ಕರ್ನಾಟಕ ಅಂತರ್ಜಲ ಅಧಿನಿಯಮ 2011 ಹಾಗೂ ನಿಯಮ 2012ನ್ನು ಜಾರಿಗೆ ತಂದಿದ್ದು, ಈ ನಿಯಮಗಳನ್ವಯ ಅಂತರ್ಜಲ ಸದ್ಬಳಕೆ ಮತ್ತು ಸಂರಕ್ಷಣೆ ಪ್ರಮುಖ ಗುರಿಯಾಗಿದೆ. ಈ ಅಧಿನಿಯಮ ಯಶಸ್ವಿಯಾಗಿ ಅನುಷ್ಠಾನವಾಗದಿದ್ದಲ್ಲಿ ಮುಂದೆ ಕುಡಿಯುವ ನೀರಿಗೂ ಆಹಾಕಾರ ಉಂಟಾಗುವುದು. ರಾಜ್ಯದಲ್ಲಿ ಈಗಾಗಲೇ ಕೊಳವೆ ಬಾವಿಗಳು ಸಹ ಬತ್ತಿ ಹೋಗುತ್ತಿದ್ದು, ಅಂತರ್ಜಲ ಮಟ್ಟವು ಸರಾಸರಿ 800 ರಿಂದ 1300 ಅಡಿಗಳ ಆಳದವರೆಗೂ ತಲುಪಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗವು ವಾರ್ಷಿಕ ಕ್ಷೇತ್ರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಈ ನಿಗದಿಪಡಿಸಿದ ಗುರಿಗಳು ಹಾಗೂ ಅಂತರ್ಜಲ ಅಧಿನಿಯಮ ಅನುಷ್ಠಾನ ರಾಷ್ಟ್ರೀಯ ಯೋಜನೆ ಅಡಿಯಲ್ಲಿ ಹಮ್ಮಿಕೊಳ್ಳಲಾದ ಯೋಜನೆಗಳನ್ನು ಅನುಷ್ಠಾನಗೊಳಿಸಿ ರಾಜ್ಯದ ಜಲಸ್ತರಗಳ ನಕಾಶೆ ತಯಾರಿಸುವುದು ಸೇರಿದಂತೆ ಇತರೆ ರಾಜ್ಯಗಳಂತೆ ಕರ್ನಾಟಕ ರಾಜ್ಯದಲ್ಲಿಯೂ ಪ್ರತ್ಯೇಕ "ಅಂತರ್ಜಲ ನಿರ್ದೇಶನಾಲಯ"ವನ್ನು ಸ್ಥಾಪಿಸಲು ಮಾನ್ಯ ಮುಖ್ಯಮಂತ್ರಿಗಳು 2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅಂತರ್ಜಲ ಸದ್ಬಳಕೆ ಹಾಗೂ ಸಂರಕ್ಷಣೆಗಾಗಿಯೇ ಪ್ರತ್ಯೇಕ ನಿರ್ದೇಶನಾಲಯವನ್ನು ಸ್ಥಾಪಿಸಲಾಗುವುದೆಂದು ಘೋಷಿಸಿರುತ್ತಾರೆ.

ದಿನಾಂಕ: 13–11–2013 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ರಾಜ್ಯದಲ್ಲಿ ಹೊಸದಾಗಿ "ಅಂತರ್ಜಲ ನಿರ್ದೇಶನಾಲಯ" ಸ್ಥಾಪಿಸಲು ಸಚಿವ ಸಂಪುಟದ ತೀರ್ಮಾನದಂತೆ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಅಜಅ 2013, ಬೆಂಗಳೂರು, ದಿನಾಂಕ: 23ನೇ ನವೆಂಬರ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂತರ್ಜಲ ವಿಭಾಗವನ್ನು ಸಿಬ್ಬಂದಿಯೊಂದಿಗೆ ಪ್ರತ್ಯೇಕಿಸಿ ರಾಜ್ಯದಲ್ಲಿ ಅಂತರ್ಜಲ ಅಭಿವೃದ್ಧಿ, ಸದ್ಬಳಕೆ ಹಾಗೂ ಸಂರಕ್ಷಣೆಗಾಗಿ ಪ್ರತ್ಯೇಕ "ಅಂತರ್ಜಲ ನಿರ್ದೇಶನಾಲಯ" ವನ್ನು ಸ್ಥಾಪಿಸಲಾಗಿದೆ. ನಿರ್ದೇಶಕರು ಇದರ ಮುಖ್ಯಸ್ಥರಾಗಿದ್ದು, ನಿರ್ದೇಶನಾಲಯದ ಕೇಂದ್ರ ಕಛೇರಿ ಬೆಂಗಳೂರಿನಲ್ಲಿರತಕ್ಕದ್ದು. ಕೇಂದ್ರ ಕಛೇರಿಯಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಯ ವಿವರ ಅನುಬಂಧ–1 ರಲ್ಲಿ ನೀಡಲಾಗಿದೆ.

ಜಿಲ್ಲಾ ಮಟ್ಟದಲ್ಲಿ 17 ಜಿಲ್ಲಾ ಕಛೇರಿಗಳು ಜಿಲ್ಲಾ ವಲಯದಡಿ ಕಾರ್ಯನಿರ್ವಹಿಸುತ್ತಿದ್ದು, ಇನ್ನು ಮುಂದೆ ರಾಜ್ಯ ವಲಯದಡಿ ಕಾರ್ಯನಿರ್ವಹಿಸತಕ್ಕದ್ದು. ಜಿಲ್ಲಾ ಕಛೇರಿಗಳ ಸಿಬ್ಬಂದಿಯ ವಿವರ ಅನುಬಂಧ–2 ರಲ್ಲಿ ನೀಡಲಾಗಿದೆ. ಉಳಿದ 13 ಜಿಲ್ಲೆಗಳಿಗೆ ಹಾಗೂ ಉಪ ವಿಭಾಗಗಳಿಗೆ ಸಿಬ್ಬಂದಿಯ ಅವಶ್ಯಕತೆಗೆ ಅನುಗುಣವಾಗಿ ಆರ್ಥಿಕ ಇಲಾಖೆಯ ಅನುಮೋದನೆ ಪಡೆಯಲು ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು.

ಅಂತರ್ಜಲ ನಿರ್ದೇಶನಾಲಯ ಹಾಗೂ ಜಿಲ್ಲಾ ಕಛೇರಿಗಳ ಸಿಬ್ಬಂದಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2702–02–005–0–15 ರಡಿ ಭರಿಸತಕ್ಕದ್ದು. ನಿರ್ದೇಶನಾಲಯ ಹಾಗೂ ಜಿಲ್ಲಾ ಕಛೇರಿಗಳಿಗೆ ಅವಶ್ಯವಿರುವ ಕಟ್ಟಡ ಹಾಗೂ ನಿರ್ವಹಣೆ, ಇತರೆ ವೆಚ್ಚಗಳಿಗಾಗಿ ಪ್ರತ್ಯೇಕ ಅನುದಾನ ಪಡೆಯಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಪ್ರತ್ಯೇಕ ಅಂತರ್ಜಲ ನಿರ್ದೇಶನಾಲಯ ಸ್ಥಾಪಿಸುವ ಬಗ್ಗೆ ಟಿಪ್ಪಣಿ ಸಂಖ್ಯೆ: FD 974 Exp-1/13, Dated: 20–09–2013 ರಲ್ಲಿ ನೀಡಿರುವ ಅಭಿಪ್ರಾಯದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಆದೇಶ ಸಂಖ್ಯೆ: ಸನೀಇ 13 ಅಜಅ 2013, ದಿನಾಂಕ: 21–11–2013ಕ್ಕೆ ಅನುಬಂಧ–1**

**ನಿರ್ದೇಶನಾಲಯದ ಸಿಬ್ಬಂದಿ ವಿವರ**

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ನಿರ್ದೇಶಕರು | 1 | 48900–63600 |
| 2 | ಮುಖ್ಯ ಭೂಭೌತ ವಿಜ್ಞಾನಿ | 1 | 40050–56500 |
| 3 | ಉಪ ನಿರ್ದೇಶಕರು | 3 | 36300–53850 |
| 4 | ಹಿರಿಯ ಭೂವಿಜ್ಞಾನಿ | 2 | 28100–50100 |
| 5 | ಹಿರಿಯ ಭೂಭೌತ ವಿಜ್ಞಾನಿ | 1 | 28100–50100 |
| 6 | ಹಿರಿಯ ರಸಾಯನ ತಜ್ಞ | 1 | 28100–50100 |
| 7 | ಡ್ರಿಲ್ಲಿಂಗ್ ಇಂಜಿನಿಯರ್ | 1 | 24000–45300 |
| 8 | ಭೂ ವಿಜ್ಞಾನಿ | 2 | 22800–43200 |
| 9 | ಹೈಡ್ರೋಲಜಿಸ್ಟ್ | 2 | 24000–45300 |
| 10 | ಕಿರಿಯ ಅಭಿಯಂತರರು | 1 | 17650–32000 |
| 11 | ಡ್ರಿಲ್ಲರ್ ಕಂ ಮೆಕ್ಯಾನಿಕ್ | 1 | 17650–32000 |
| 12 | ಮ್ಯಾನೇಜರ್ | 1 | 21600–40050 |
| 13 | ಪ್ರಥಮ ದರ್ಜೆ ಸಹಾಯಕ | 3 | 14550–26700 |
| 14 | ದ್ವಿತೀಯ ದರ್ಜೆ ಸಹಾಯಕ | 3 | 11600–21000 |
| 15 | ವಾಹನ ಚಾಲಕ | 6 | 14550–26700 |
| 16 | ಅಟೆಂಡರ್ | 2 | 11000–19000 |
| 17 | ಗ್ರೂಪ್–ಡಿ | 5 | 9600–14550 |
| **ಒಟ್ಟು** | | **36** | |

**ಆದೇಶ ಸಂಖ್ಯೆ: ಸನೀಇ 13 ಅಜಅ 2013, ದಿನಾಂಕ: 21–11–2013ಕ್ಕೆ ಅನುಬಂಧ–2**

**ಜಿಲ್ಲಾ ಕಛೇರಿಗಳ ಸಿಬ್ಬಂದಿ ವಿವರ**

(ಬಳ್ಳಾರಿ, ಬೆಳಗಾವಿ, ಬೆಂಗಳೂರು, ಚಿತ್ರದುರ್ಗ, ಚಿಕ್ಕಬಳ್ಳಾಪುರ, ಧಾರವಾಡ, ಗುಲ್ಬರ್ಗಾ, ಮೈಸೂರು, ಕಾರವಾರ, ತುಮಕೂರು, ಮಂಗಳೂರು, ಚಿಕ್ಕಮಗಳೂರು, ಶಿವಮೊಗ್ಗ, ಮಂಡ್ಯ, ಹಾಸನ, ಕೋಲಾರ ಹಾಗೂ ಬಿಜಾಪುರ)

| ಕ್ರ. ಸಂ. | ಹುದ್ದೆ | ಹುದ್ದೆಗಳ ಸಂಖ್ಯೆ | ವೇತನ ಶ್ರೇಣಿ |
|---|---|---|---|
| 1 | ಹಿರಿಯ ಭೂವಿಜ್ಞಾನಿ | 1 | 28100–50100 |
| 2 | ಭೂ ವಿಜ್ಞಾನಿ | 3 | 22800–43200 |
| 3 | ಭೂ ಭೌತವಿಜ್ಞಾನಿ | 1 | 22800–43200 |
| 4 | ಕಿರಿಯ ಅಭಿಯಂತರರು | 1 | 17650–32000 |
| 5 | ಪ್ರಥಮ ದರ್ಜೆ ಸಹಾಯಕ | 1 | 14550–26700 |
| 6 | ದ್ವಿತೀಯ ದರ್ಜೆ ಸಹಾಯಕ | 2 | 11600–21000 |
| 7 | ಬೆರಳಚ್ಚುಗಾರರು | 1 | 11600–21000 |
| 8 | ವಾಹನ ಚಾಲಕರು | 1 | 14550–26700 |
| 9 | ಗ್ರೂಪ್–ಡಿ | 2 | 9600–14550 |
| | ಒಟ್ಟು | 13 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**PR.329**

**SC.200**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59